ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಎಂ.ಫಿಲ್.ಪದವಿಯ ನಿಬಂಧ



# "ಪೂರ್ಣಚಂದ್ರತೇಜಸ್ವಿ ಮತ್ತು ಬಿ.ಜಿ.ಎಲ್.ಸ್ವಾಮಿಯವರ ಪರಿಸರದ ಬಗೆಗಿನ ಚಿಂತನೆಗಳು"

(ಪರಿಸರದಕತೆ - ಹಸುರುಹೊನ್ನು)

ಸಂಶೋಧನಾ ವಿದ್ಯಾರ್ಥಿನಿ
ಸುಮಲತಾ.ಬಿ.ಕೆ.
Reg.No.KVMBKS-00434

ಮಾರ್ಗದರ್ಶಕರು
ಡಾ.ವಿ.ಚಂದ್ರಶೇಖರ್ ನಂಗಲಿ



ಕಾವ್ಯಮಂಡಲ
ನಂ.೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ
ಬಸವನಗುಡಿ
ಬೆಂಗಳೂರು - ೫೬೦೦೦೪
೨೦೦೯-೧೦

855

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಎಂ.ಫಿಲ್.ಪದವಿಯ ನಿಬಂಧ



# "ಪೂರ್ಣಚಂದ್ರತೇಜಸ್ವಿ ಮತ್ತು ಬಿ.ಜಿ.ಎಲ್.ಸ್ವಾಮಿಯವರ ಪರಿಸರದ ಬಗೆಗಿನ ಚಿಂತನೆಗಳು"

(ಪರಿಸರದಕತೆ - ಹಸುರುಹೊನ್ನು)

ಸಂಶೋಧನಾ ವಿದ್ಯಾರ್ಥಿನಿ
ಸುಮಲತಾ.ಬಿ.ಕೆ.
Reg.No.KVMBKS-00434

ಮಾರ್ಗದರ್ಶಕರು
ಡಾ.ವಿ.ಚಂದ್ರಶೇಖರ್ ನಂಗಲಿ

ಕಾವ್ಯಮಂಡಲ
ನಂ.೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ
ಬಸವನಗುಡಿ
ಬೆಂಗಳೂರು - ೫೬೦೦೦೪

೨೦೦೯-೧೦

## ದೃಢೀಕರಣ ಪತ್ರ

**"ಪೂರ್ಣಚಂದ್ರತೇಜಸ್ವಿ ಮತ್ತು ಬಿ.ಜಿ.ಎಲ್.ಸ್ವಾಮಿಯವರ ಪರಿಸರದ ಬಗೆಗಿನ ಚಿಂತನೆಗಳು"**(ಪರಿಸರದ ಕತೆ – ಹಸಿರುಹೊನ್ನು) ಎಂಬ ವಿಷಯವನ್ನು ಕುರಿತು ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರಿಗೆ ಎಂ.ಫಿಲ್ ಪದವಿಗಾಗಿ **ಡಾ.ವಿ.ಚಂದ್ರಶೇಖರ್ ನಂಗಲಿ** ಅವರ ಮಾರ್ಗದರ್ಶನದಲ್ಲಿ ಸಂಶೋಧನಾ ವಿದ್ಯಾರ್ಥಿಯಾದ ನಾನು ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿದ್ದೇನೆ. ಈ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಪ್ರಕಟಣೆಗಾಗಿ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.


ತಮ್ಮ ವಿಶ್ವಾಸಿ,
Sumalatha B.K.
(ಸುಮಲತಾ.ಬಿ.ಕೆ.)
ಸಂಶೋಧನಾ ವಿದ್ಯಾರ್ಥಿನಿ
ಕಾವ್ಯಮಂಡಲ
ನಂ.೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ
ಬಸವನಗುಡಿ
ಬೆಂಗಳೂರು – ೫೬೦೦೦೪


ಸ್ಥಳ : ಬೆಂಗಳೂರು
ದಿನಾಂಕ : 12/07/2010

## ಮಾರ್ಗದರ್ಶಕರ ಪ್ರಮಾಣಪತ್ರ

"ಪೂರ್ಣಚಂದ್ರತೇಜಸ್ವಿ ಮತ್ತು ಬಿ.ಜಿ.ಎಲ್.ಸ್ವಾಮಿಯವರ ಪರಿಸರದ ಬಗೆಗಿನ ಚಿಂತನೆಗಳು"(ಪರಿಸರದ ಕತೆ - ಹಸಿರುಹೊನ್ನು) ಎಂಬ ವಿಷಯವನ್ನು ಕುರಿತು ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸಲು **ಸುಮಲತಾ.ಬಿ.ಕೆ.** ಅವರು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿದ್ದಾರೆ. ಈ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾಲಯದ ಪದವಿ, ಪ್ರಕಟಣೆಗಾಗಲೀ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

(ಡಾ.ವಿ.ಚಂದ್ರಶೇಖರ ಸಂಗಲಿ)

ಡಾ. ವಿ. ಚಂದ್ರಶೇಖರ (ಸಂಗಲಿ)
ಪ್ರಿನ್ಸಿಪಾಲರು,
ಸರ್ಕಾರಿ ಪ್ರಥಮ ದ[illegible] ...ಜು,
ಹಾನಗಲ್ಲ-581 104. ಜಿ॥ ಹಾವೇರಿ.

ಸ್ಥಳ : ಬೆಂಗಳೂರು
ದಿನಾಂಕ: 12/09/2010

# ಅಧ್ಯಾಯ – 1

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯದಲ್ಲಿ ಕೃತಿಯ ಧೋರಣೆ, ವಸ್ತು, ಶೈಲಿಗೆ ಸಂಬಂಧಿಸಿದಂತೆ ಅವುಗಳನ್ನು ವಿಭಾಗಿಸಿ ಹಲವು ಪಂಥಗಳಿಗೆ ಸೇರಿಸಿಬಿಡುವ ಸಾಂಪ್ರದಾಯಿಕ ಕ್ರಮವೊಂದು ಸಾಹಿತ್ಯಾಧ್ಯಯನದಲ್ಲಿ ರೂಢಿಯಲ್ಲಿರುವ ಸಂದರ್ಭದಲ್ಲೇ ಈ ಮಿತಿಗಳಿಂದ ಪಾರಾಗಿ ವಸ್ತುವೈವಿಧ್ಯ, ಧೋರಣೆಯಿಂದ ಗಮನ ಸೆಳೆಯುವ ಕೃತಿಗಳನ್ನು ಕಾಣಬಹುದು. ಪೂರ್ಣಚಂದ್ರ ತೇಜಸ್ವಿಯವರ 'ಪರಿಸರದ ಕತೆಗಳು' ಮತ್ತು ಬಿ.ಜಿ.ಎಲ್.ಸ್ವಾಮಿಯವರ 'ಹಸಿರುಹೊನ್ನು' ಕೃತಿಗಳು ಇಂತಹವಕ್ಕೊಂದು ಉತ್ತಮ ನಿದರ್ಶನ. ಈ ಕೃತಿಗಳು ಪರಿಸರದ ಬಗೆಗೆ ನಮ್ಮ ಅರಿವನ್ನು ವಿಸ್ತರಿಸುತ್ತಾ, ಆಲೋಚನೆಯನ್ನು ಬೇರೆ ದಿಕ್ಕಿನೆಡೆಗೆ ಕೊಂಡೊಯ್ಯುತ್ತವೆ.

"ತೇಜಸ್ವಿ ಮತ್ತು ಬಿ.ಜಿ.ಎಲ್.ಸ್ವಾಮಿಯವರ ಪರಿಸರದ ಬಗೆಗಿನ ಚಿಂತನೆಗಳು ಎಂಬ ತೌಲನಿಕ ಅಧ್ಯಯನವು ಪರಿಸರದ ಬಗೆಗಿನ ಇವರಿಬ್ಬರ ಗ್ರಹಿಕೆಗಳ ಬಗ್ಗೆ ಸೂಕ್ಷ್ಮ ಮತ್ತು ವಿಶ್ಲೇಷಣಾತ್ಮಕ ನೋಟವೊಂದನ್ನು ನೀಡುತ್ತದೆ. ತೇಜಸ್ವಿಯವರು ತಾವು ಪಡೆದುಕೊಂಡಿರುವ ಅನುಭವದ ಮೂಲಕ ಪ್ರಾಣಿ, ಪಕ್ಷಿ, ಮನುಷ್ಯ ಒಟ್ಟಾರೆ ಜೀವಸಂಕುಲದ ವೈವಿಧ್ಯತೆಯನ್ನು, ಸ್ವರೂಪ, ಗುಣಲಕ್ಷಣಗಳನ್ನು ನೀಡುತ್ತಾರೆ. ಪರಿಸರದ ಬಗೆಗಿನ ತೇಜಸ್ವಿಯವರ ಆಸಕ್ತಿ, ಕುತೂಹಲ, ಶೋಧನೆಯು ಪರಿಸರದಲ್ಲಿ ಅಡಗಿರುವ ರಹಸ್ಯವನ್ನು ಭೇದಿಸಿ ತಿಳಿದುಕೊಂಡು ಅವನ್ನು ತನ್ನ ಅವಶ್ಯಕತೆಗಳಿಗೆ ತಕ್ಕಂತೆ ಬಳಸಿಕೊಂಡು ಲಾಭಗಳಿಸಬೇಕೆಂಬ ದುರಾಲೋಚನೆಯಿಂದ ಮೂಡಿದ್ದಲ್ಲ. ಅವರ ಧೋರಣೆಯು "ಪರಿಸರದ ಕತೆ"ಯಲ್ಲಿ ಅವರೇ ಉದ್ಧರಿಸಿರುವ ಘುಕವೋಕಾನ ಮಾತನ್ನು ಹೆಚ್ಚು ಹೋಲುವಂತಹದ್ದು "ಪರಿಸರದ ರಹಸ್ಯವನ್ನೆಲ್ಲ ಸಂಪೂರ್ಣ ತಿಳಿಯುತ್ತೇನೆಂದು ಹೋಗುವುದು ಮೂರ್ಖತನವೇ ಸರಿ. ಸುಮ್ಮನೇ ಅಗತ್ಯ ಇದ್ದಷ್ಟನ್ನು ಮಾತ್ರ ತಿಳಿದುಕೊಂಡು ಮಿಕ್ಕಿದ್ದನ್ನು ನೋಡಿ ಅಚ್ಚರಿ ಪಡುತ್ತ ಇದ್ದು ಬಿಡುವುದು ಒಳ್ಳೆಯದು" ಎಂದು ಬರೆಯುತ್ತಾ ತಾವು ಪಡೆದುಕೊಂಡಿರುವ ಎಲ್ಲಾ ಅನುಭವಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸುವಲ್ಲಿ ತೇಜಸ್ವಿ ವೈಶಿಷ್ಟ್ಯತೆ ಮೆರೆಯುತ್ತಾರೆ.

ಪರಿಸರದ ಬಗೆಗಿನ ಅಧ್ಯಯನ ತೇಜಸ್ವಿಯವರಿಗೆ ಪ್ರವೃತ್ತಿಯಾದರೆ ಬಿ.ಜಿ.ಎಲ್.ಸ್ವಾಮಿಯವರಿಗೆ ಪ್ರವೃತ್ತಿಯ ಜೊತೆಗೆ ವೃತ್ತಿಯೂ ಆಗಿದೆ. ಸಸ್ಯಶಾಸ್ತ್ರದ ಪ್ರಾಧ್ಯಾಪಕರಾಗಿ ಪರಿಸರದಲ್ಲಿನ ಮರ-ಗಿಡಗಳ ಬಗೆಗೆ ಅವುಗಳ ಸ್ವರೂಪ, ವೈವಿಧ್ಯತೆಯನ್ನು ತಿಳಿಸ ಹೊರಡುವ ಸ್ವಾಮಿ ಅದನ್ನು ಅದರ ಎಲ್ಲಾ ಚಾರಿತ್ರಿಕ, ಜಾನಪದೀಯ, ವೈದ್ಯಕೀಯ, ವೈಜ್ಞಾನಿಕ, ಸಾಹಿತ್ಯಕ

ಅಂಶಗಳೊಂದಿಗೆ ಅಚ್ಚರಿ ಪಡುವಷ್ಟರ ಮಟ್ಟಿಗೆ ವಿವರಿಸುತ್ತಾರೆ. ಹಾಗೆಯೇ ಅಧ್ಯಯನ ದೃಷ್ಟಿಯಿಂದ ಕೈಗೊಂಡ ಇಂತಹ ಪ್ರವಾಸಗಳಲ್ಲಿರುವ ಹಲವು ನ್ಯೂನತೆಗಳ ಬಗೆಗೂ ಗಮನ ಸೆಳೆಯುತ್ತಾರೆ.

ತೇಜಸ್ವಿ ಮತ್ತು ಬಿ.ಜಿ.ಎಲ್.ಸ್ವಾಮಿಯವರ ಪರಿಸರದ ಚಿಂತನೆಗಳನ್ನು ಕುರಿತು ಹಲವು ಲೇಖನಗಳು, ಪ್ರಬಂಧಗಳು ಹೊರಬಂದಿವೆ. ಈ ನಿಟ್ಟಿನಲ್ಲಿ ಡಾ.ಮುಳುಕುಂಟೆ ರಮೇಶ್ ಅವರು ಬಿ.ಜಿ.ಎಲ್. ಸ್ವಾಮಿಯವರನ್ನು ಕುರಿತ ತಮ್ಮ ಸಂಶೋಧನೆಗಾಗಿ ಪಿಎಚ್.ಡಿ ಪದವಿಯನ್ನು ಪಡೆದುಕೊಂಡಿದ್ದಾರೆ. ಡಾ.ವಿದ್ಯಾಶಂಕರ್ ಅವರು 'ಕನ್ನಡದಲ್ಲಿ ಪ್ರವಾಸ ಸಾಹಿತ್ಯ'ದಲ್ಲಿ 'ಹಸಿರುಹೊನ್ನು' ಕೃತಿಯ ಸಂಕ್ಷಿಪ್ತ ವಿವರಣೆಯಿದೆ. ಡಾ.ಚಂದ್ರಶೇಖರ ನಂಗಲಿಯವರ ಪಿಎಚ್.ಡಿ ಪ್ರಬಂಧ 'ನೆಲ ಮುಟ್ಟುವ ಪ್ರೀತಿ' ಎಂಬುದರಲ್ಲಿ ಬಿ.ಜಿ.ಎಲ್.ಸ್ವಾಮಿ ಮತ್ತು ತೇಜಸ್ವಿ ಇಬ್ಬರ ಬಗೆಗೂ ಒಂದೊಂದು ಅಧ್ಯಾಯದಲ್ಲಿ ವಿಶ್ಲೇಷಿಸಿದ್ದಾರೆ. ಹಾಗೆ ಇವರಿಬ್ಬರನ್ನು ತೌಲನಿಕವಾಗಿ ನೋಡಲು ಪ್ರಯತ್ನಿಸಿದ್ದಾರೆ. ತೇಜಸ್ವಿಯವರ ಬಗ್ಗೆ ಕೃಷ್ಣಮೂರ್ತಿ ಹನೂರರ 'ನುಡಿಶೋಧ'ದಲ್ಲಿ ಒಂದು ಲೇಖನವಿದೆ. ಡಾ.ಎಚ್.ಶಶಿಕಲಾ ತಮ್ಮ 'ತೇಜಸ್ವಿ ಸಂಸ್ಕೃತಿ ಗ್ರಹಿಕೆ' ಎಂಬ ಪಿಎಚ್.ಡಿ ಪ್ರಬಂಧದಲ್ಲಿ ತೇಜಸ್ವಿಯವರ ಪರಿಸರದ ಚಿಂತನೆಗಳನ್ನು ಗ್ರಹಿಸಿದ್ದಾರೆ.

ಈ ಲೇಖನ, ಪ್ರಬಂಧಗಳು ಬಿಡಿಬಿಡಿಯಾಗಿ ಇವರಿಬ್ಬರ ಪರಿಸರದ ಚಿಂತನೆಗಳ ಬಗೆಗೆ ಮಹತ್ವದ ಅಂಶಗಳನ್ನು ತಿಳಿಸಿವೆ. ಇಲ್ಲಿನ ಅಧ್ಯಯನದ ಉದ್ದೇಶ ತೌಲನಿಕವಾಗಿ ಈ ಇಬ್ಬರೂ ಲೇಖಕರನ್ನು ಹೋಲಿಸಿದಾಗ ಕಂಡುಬರುವ ಸಾಮ್ಯತೆಗಳನ್ನು, ವೈಶಿಷ್ಟ್ಯವನ್ನು ಆ ಮೂಲಕ ಕನ್ನಡ ಸಾಹಿತ್ಯಕ್ಕೆ ಇವರ ಕೊಡುಗೆಯನ್ನು ಇವರ ಚಿಂತನಾಕ್ರಮವನ್ನು ಪ್ರಸ್ತುತ ಸನ್ನಿವೇಶಕ್ಕೆ ಅನ್ವಯಿಸಿ ನೋಡುವಾಗ ಪಡೆದುಕೊಳ್ಳುವ ಸ್ಥಾನ-ಮಾನಗಳನ್ನು ಗುರುತಿಸುವುದೇ ಆಗಿದೆ.

"ಪೂರ್ಣಚಂದ್ರತೇಜಸ್ವಿ ಮತ್ತು ಬಿ.ಜಿ.ಎಲ್.ಸ್ವಾಮಿಯವರ ಪರಿಸರದ ಬಗೆಗಿನ ಚಿಂತನೆಗಳು" ಈ ನಿಬಂಧವನ್ನು ನಾಲ್ಕು ಅಧ್ಯಾಯಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ.

**ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪರಿಸರ : ಎರಡು ಮಾದರಿಗಳು :**

ಕೃತಿಯಲ್ಲಿ ವ್ಯಕ್ತವಾಗುವ ಪ್ರತಿಯೊಂದು ಅಂಶವು ಅದು ಲೇಖಕರ ಕಲ್ಪನೆಯಾಗಿರಬಹುದು. ಆತನನ್ನು ಪ್ರಭಾವಿಸಲ್ಪಟ್ಟದ್ದಾಗಿರಬಹುದು ಅಥವಾ ತಾನು ಪಡೆದುಕೊಂಡ ಅನುಭವಗಳ ಫಲರೂಪವಾಗಿರಬಹುದು. ಇವುಗಳ ಮೂಲಕ ಅಲ್ಲೊಂದು ಪರಿಸರ ಸೃಷ್ಟಿಯಾಗಿರುತ್ತದೆ. ಇಂತಹ ಸೃಷ್ಟಿ ಕಾರ್ಯದಲ್ಲಿ ಲೇಖಕನ ದೃಷ್ಟಿಕೋನ, ಮನೋಭಾವ, ಅಭಿರುಚಿ ವ್ಯಕ್ತವಾಗುತ್ತಿರುತ್ತದೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪ್ರಮುಖರೆಂದು ಗುರುತಿಸುವ ಕುವೆಂಪು ಮತ್ತು ಶಿವರಾಮಕಾರಂತರನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ. ಇವರಿಬ್ಬರ ಕೃತಿಗಳಲ್ಲಿ

'ಪರಿಸರ'ದ ಚಿತ್ರಣ ಮೂಡಿಬಂದಿರುವ ರೀತಿಯನ್ನು ಅದಕ್ಕೆ ಮುಖಾಮುಖಿಯಾದಾಗಿನ ಅವರ ಆಲೋಚನೆಗಳನ್ನು, ಗ್ರಹಿಕೆಯನ್ನು ಮತ್ತು ತಮ್ಮ ಸಾಹಿತ್ಯಕೃತಿಗಳಲ್ಲಿ ಅದನ್ನು ಒಡಮೂಡಿಸಿರುವ ಕ್ರಮವನ್ನು ಜೊತೆಗೆ ಅವರ ಕಾಳಜಿಗಳು ಎಂತಹದ್ದೆಂಬುದನ್ನು ತಿಳಿಯುವುದು ಇಲ್ಲಿ ಅವಶ್ಯಕವೆಂದೆನಿಸುತ್ತದೆ. ಮತ್ತು ತೇಜಸ್ವಿ, ಬಿ.ಜಿ.ಎಲ್.ಸ್ವಾಮಿಯವರ 'ಪರಿಸರ'ದ ಚಿಂತನೆಗಳು ಇವರಿಗಿಂತ ಹೇಗೆ ಭಿನ್ನವಾಗಿವೆ ಎಂದು ಅರ್ಥ ಮಾಡಿಕೊಳ್ಳಲು ಇದು ನೆರವಾಗಬಹುದು.

**ತೇಜಸ್ವಿಯವರ 'ಪರಿಸರದ ಕತೆ'ಗಳಲ್ಲಿ ಪರಿಸರದ ಸ್ವರೂಪ :**

ತೇಜಸ್ವಿಯವರ ಪರಿಸರದ ಕತೆಗಳು ನವಿರಾದ ಹಾಸ್ಯದೊಂದಿಗೆ ಸರಳ ಭಾಷೆಯಲ್ಲೇ ಗಂಭೀರ ಚಿಂತನೆಗಳನ್ನೊಳಗೊಂಡು ಮುಂದುವರಿಯುತ್ತದೆ. 'ಪರಿಸರ'ವನ್ನು ತೇಜಸ್ವಿಯವರು ಒಂದು ಜ್ಞಾನಶಿಸ್ತಾಗಿ ಅಧ್ಯಯನ ಮಾಡದೆ ಇದ್ದರೂ ಅದು ಅವರ ಜೀವನ ಶೈಲಿಯಲ್ಲೇ ರೂಪುಗೊಂಡು ಅನುಭವದ ಮೂಲಕ ಅಭಿವ್ಯಕ್ತವಾಗಿರುವುದನ್ನು ನೋಡಬಹುದಾಗಿದೆ. 'ಪರಿಸರದ ಕತೆ'ಯಲ್ಲಿ ಅವರೇ ಹೇಳಿಕೊಂಡಿರುವಂತೆ "ನಾನು ಕಾಡುಕೊಂಡ ಅನಂತರದ ಎಷ್ಟೋ ಅನುಭವಗಳನ್ನು ಗೆಳೆಯರೊಡನೆ ಹರಟುತ್ತಾ ಕ್ವಚ್ಚಿತ್ತಾಗಿ ಹೇಳಿದ್ದೇನೆ. ಆದರೆ ಅವನ್ನೆಲ್ಲಾ ಬರೆಯಬೇಕೆಂದು ಈವರೆಗೂ ನನಗೆ ಅನ್ನಿಸಿರಲಿಲ್ಲ. ಏಕೆಂದರೆ, ಅವು ಯಾವುವೂ ಉಲ್ಲೇಖಾರ್ಹವಾದ ಅಸಾಧಾರಣ ಅನುಭವಗಳಾಗಿ ಇರಲಿಲ್ಲ. ಆದರೆ ಪರಿಸರದ ಬಗ್ಗೆ ಆಸ್ಥೆ, ಕುತೂಹಲಗಳು ಮೂಡಿದ, ನಾನೊಬ್ಬ ಪರಿಸರವಾದಿಯಾಗಿ ರೂಪುಗೊಂಡ ಹಾದಿ ಇದು" ತೇಜಸ್ವಿಯವರನ್ನು ಒಬ್ಬ ಸೃಜನಶೀಲ ಲೇಖಕನಾಗಿ ರೂಪಿಸಲು ಸುತ್ತಲಿನ ಪರಿಸರ ಹೀಗೆ ಕಾರಣವಾಗಿದೆ. ಹಾಗೆಯೇ ಅದನ್ನು ತಮ್ಮ ಗ್ರಹಿಕೆಯ ಮೂಲಕ ಅವರು ಅಭಿವ್ಯಕ್ತಿಸಿರುವ ರೀತಿಯೂ ವಿಶಿಷ್ಟವಾಗಿದೆ.

**ಬಿ.ಜಿ.ಎಲ್.ಸ್ವಾಮಿಯವರ 'ಹಸುರು ಹೊನ್ನು' ಕೃತಿಯಲ್ಲಿ ಪರಿಸರದ ಸ್ವರೂಪ :**

ಮಾನವಿಕ ಕ್ಷೇತ್ರದಲ್ಲಿ ತೊಡಗಿಸಿಕೊಂಡು ದಟ್ಟವಾದ ಅನುಭವವನ್ನು ಪಡೆದಂತಹ ವ್ಯಕ್ತಿ ಲೇಖಕನೂ ಆಗಿದ್ದಾಗ, ಅವನ ಅಭಿವ್ಯಕ್ತಿಯು ಹೊಸತನದೊಂದಿಗೆ, ಹೊಸ ನೋಟವನ್ನು ಒದಗಿಸುತ್ತದೆ ಎಂಬುದಕ್ಕೆ ಬಿ.ಜಿ.ಎಲ್.ಸ್ವಾಮಿಯವರ 'ಹಸುರು ಹೊನ್ನು' ಉತ್ತಮ ನಿದರ್ಶನ. ಇಲ್ಲಿ ಪರಿಸರದ ಬಗೆಗಿನ ಅಧ್ಯಯನ ಒಂದು ಜ್ಞಾನಶಿಸ್ತಾಗಿ ರೂಪುಗೊಂಡಿದ್ದರೂ ಸ್ವಾಮಿಯವರ ಆಸಕ್ತಿ, ಕುತೂಹಲ, ಲೇಖಕ ಪ್ರಜ್ಞೆ ಇಡೀ ಕೃತಿಯನ್ನು ಜೀವಂತವಾಗಿಸಿದೆ. ಸೃಷ್ಟಿಯ ಹಲವು ವೈವಿಧ್ಯತೆ, ವೈಚಿತ್ರ್ಯವನ್ನು ಹೇಳುತ್ತಲೇ ಅದರ ಸುತ್ತ ಹರಡಿಕೊಂಡಿರುವ ರಾಜಕಾರಣವನ್ನು,

ಮಿತಿಮೀರಿದ ಮನುಷ್ಯನ ವಿನಾಶಕಾರಿ ವರ್ತನೆಯನ್ನು, ವ್ಯವಸ್ಥೆಯಲ್ಲಿನ ಹಲವು ದೋಷಗಳನ್ನು ಹೇಳುತ್ತ ಅದರ ಕಡೆ ನಮ್ಮ ಗಮನವನ್ನು ಸೆಳೆಯುತ್ತದೆ.

**ಸಮಕಾಲೀನ ಸಂದರ್ಭಕ್ಕೆ ತೇಜಸ್ವಿ ಮತ್ತು ಬಿ.ಜಿ.ಎಲ್.ಸ್ವಾಮಿಯವರ ಚಿಂತನೆಗಳ ಕೊಡುಗೆಗಳು:**

ತೇಜಸ್ವಿ ಮತ್ತು ಬಿ.ಜಿ.ಎಲ್.ಸ್ವಾಮಿಯವರ ಪರಿಸರದ ಚಿಂತನೆಗಳು ಕೇವಲ ಸೃಷ್ಟಿಯ ವೈವಿಧ್ಯತೆಯನ್ನು ಅನಾವರಣಗೊಳಿಸುವ, ಅಚ್ಚರಿ ಪಡಿಸುವ ಸಂದರ್ಭಗಳ ಮಾಲಿಕೆಯಾಗಿ ಮಾತ್ರ ಉಳಿದಿರದೆ ಅಲ್ಲಿ ಪರಿಸರದ ಬಗೆಗಿನ ಕಾಳಜಿ, ಪ್ರೀತಿಯೂ, ಅದನ್ನು ಯಾವಾಗಲೂ ಆರೋಗ್ಯಕರವಾಗಿಡಬೇಕೆಂಬ ಹಂಬಲ, ಆಶಯವೂ ವ್ಯಕ್ತವಾಗುತ್ತದೆ. ಹಾಗೆಯೇ ಸಮಕಾಲೀನ ಸಂದರ್ಭದಲ್ಲಿನ ಎಷ್ಟೋ ದುರಂತಗಳಿಗೆ ಕಾರಣವೂ ನಮಗೆ ಇಲ್ಲಿ ದೊರಕುತ್ತದೆ. ಅದರ ಬಗ್ಗೆ ಅರಿವು ಮೂಡಲು ಸಹಕಾರಿಯಾಗುತ್ತದೆ. ಇವರಿಬ್ಬರ ಚಿಂತನೆಗಳು ಇವತ್ತಿನ ಸಂದರ್ಭಕ್ಕೆ ಎಷ್ಟರಮಟ್ಟಿಗೆ ಅನ್ವಯವಾಗುತ್ತದೆಂಬುದನ್ನು ತಿಳಿಯಲು ಅಧ್ಯಯನದಿಂದ ಸಹಾಯವಾಗಬಹುದು. ಈ ಅಧ್ಯಯನದ ಮೂಲಕ ಪೂರ್ಣಚಂದ್ರ ತೇಜಸ್ವಿ ಮತ್ತು ಬಿ.ಜಿ.ಎಲ್. ಸ್ವಾಮಿಯವರ ಪರಿಸರದ ಬಗೆಗಿನ ಚಿಂತನೆಗಳನ್ನು ಹಾಗೂ ಕನ್ನಡ ಸಾಹಿತ್ಯಕ್ಕೆ ಅವರು ಈ ಮೂಲಕ ತಂದುಕೊಟ್ಟ ಹೊಸತನವನ್ನು ಗ್ರಹಿಸಲು ಯತ್ನಿಸಲಾಗುವುದು.

## ಅಧ್ಯಾಯ – 2

## ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪರಿಸರ : ಎರಡು ಮಾದರಿಗಳು

ಯಾವೊಬ್ಬ ಸಾಹಿತಿಯೂ ಶೂನ್ಯ ಅಥವಾ ನಿರ್ವಾತದಲ್ಲಿ ಸಾಹಿತ್ಯ ರಚನೆ ಮಾಡಲು ಸಾಧ್ಯವಿಲ್ಲ. ಆತನಿರುವ ಪರಿಸರವು ನಿರಂತರವಾಗಿ ಆತನನ್ನು ಪ್ರಭಾವಿಸುತ್ತಲೇ ಇರುತ್ತದೆ. ಈ ರೀತಿ ಹಲವು ಪ್ರಭಾವಗಳ ಮೂಲಕ ರಚನೆಯಾದ ಸಾಹಿತ್ಯ ಕೃತಿಯಲ್ಲೂ ಆ ಲೇಖಕ ಕಂಡು ಗ್ರಹಿಸಿದ ಪರಿಸರವೊಂದು ರೂಪುಗೊಂಡಿರುತ್ತದೆ. ಅಂದರೆ ಪರಿಸರ ಎನ್ನುವುದು ಎಲ್ಲ ಕೃತಿಗಳಲ್ಲಿಯೂ ಇರುವಂತಹದ್ದೆ, ಆದರೆ ಕೆಲವು ಕೃತಿಗಳಲ್ಲಿ ಪ್ರಧಾನ ಕಾಳಜಿಯಾಗಿ, ಕೇಂದ್ರವಾಗಿ ಕಾಣುವ ಅಂಶ ಇನ್ನೊಂದು ಕಡೆ ಸಹಜವಾಗಿ ಮೂಡಿರುತ್ತದೆ. ಮೊದಲೆಲ್ಲ ಪರಿಸರ ಎಂದರೆ ಪ್ರಕೃತಿ ಎಂದು ಅರ್ಥೈಸಲಾಗುತ್ತಿತ್ತು. ನಂತರದ ಸಂದರ್ಭದಲ್ಲಿ ಅದು ವ್ಯಾಪಕವಾದ, ವಿಸ್ತೃತವಾದ ರೂಪ ಪಡೆದುಕೊಳ್ಳತೊಡಗಿತು. ಇಲ್ಲಿ ಮನುಷ್ಯ ಕೇಂದ್ರನಲ್ಲ. ಪರಿಸರದೊಳಗೆ ಮನುಷ್ಯನು ಒಂದು ಅಂಶವಷ್ಟೇ. ಎಲ್ಲಾ ಜೀವಸಂಕುಲ, ವನ ಸಂಪತ್ತುಗಳನ್ನೊಳಗೊಂಡಂತೆ ರೂಪುಗೊಂಡಿರುವ ಪರಸ್ಪರ ಸಂಬಂಧಿಯಾದ ಜೀವಜಾಲ ಇದಾಗಿದೆ. ಆದರೆ ಲಾಭದ ಮನುಷ್ಯನ ಕಾರಣದಿಂದ ಪರಿಸರ ಭಗ್ನಗೊಳ್ಳುತ್ತಿದೆ. ವಿಷಪೂರಿತಗೊಳ್ಳುತ್ತಿದೆ. ಇದು ಪ್ರಕೃತಿಯು ವೈಭವೀಕರಣದ ಪ್ರಶ್ನೆ ಆಗಿರದೆ ಸಂಕೀರ್ಣ ಬದುಕಿನ ನೆಲೆಯೊಂದಿಗೆ ಸೇರಿಕೊಂಡಿದೆ. ಈ ರೀತಿಯ ಪರಿಸರವನ್ನು ಅರ್ಥೈಸಿಕೊಂಡಿರುವ ಲೇಖಕರಲ್ಲೇ ವಿವಿಧ ವ್ಯತ್ಯಾಸಗಳನ್ನು ಗುರುತಿಸಬಹುದು. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕುವೆಂಪು, ಬೇಂದ್ರೆ, ಕಾರಂತ, ಅಡಿಗ, ಲಂಕೇಶ್, ತೇಜಸ್ವಿ, ದೇವನೂರು ಮಹಾದೇವ ಹೀಗೆ ಹಲವು ಲೇಖಕರ ಚಿಂತನೆಗಳನ್ನು ನೋಡಿದಾಗಲೂ ಹಲವು ಭಿನ್ನತೆಗಳು, ವೈಶಿಷ್ಟ್ಯತೆಗಳೂ ಕಂಡುಬರುತ್ತವೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪರಿಸರ ಎಂದಾಗ ಕುವೆಂಪು ಮತ್ತು ಕಾರಂತರ ಎರಡು ಮಾದರಿಗಳನಷ್ಟೇ ಇಲ್ಲಿ ತೆಗೆದುಕೊಳ್ಳಲಾಗಿದೆ. ಅವರ ಲೇಖನಗಳು, ಕಾವ್ಯದಲ್ಲಿ 'ಪರಿಸರ'ದ ಸ್ವರೂಪ ಮೂಡಿಬಂದಿರುವ ಕ್ರಮವನ್ನಿಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ. ಆ ಮೂಲಕ ತೇಜಸ್ವಿ ಮತ್ತು ಬಿ.ಜಿ.ಎಲ್.ಸ್ವಾಮಿಯವರ ಚಿಂತನೆಗಳು ಹೇಗೆ ಭಿನ್ನವಾಗಿ ನಿಲ್ಲುತ್ತವೆ ಎಂದು ತಿಳಿಯುವ ಆಶಯವೂ ಇಲ್ಲಿದೆ.

ಮಲೆನಾಡಿನ ಪರಿಸರದಲ್ಲಿ ಹುಟ್ಟಿ ಬೆಳೆದ ಕುವೆಂಪುರವರನ್ನು ಕನ್ನಡ ಸಾಹಿತ್ಯದಲ್ಲಿ ಪ್ರಮುಖ ಕವಿಯನ್ನಾಗಿಸುವಲ್ಲಿ ಅವರ ಹಿಂದಿರುವ ಪರಿಸರವೂ ಬಹುಮುಖ್ಯ ಪಾತ್ರವಹಿಸುತ್ತದೆ.

ಮಲೆನಾಡಿನ ಪ್ರಾಕೃತಿಕ, ಸಾಮಾಜಿಕ, ಸಾಂಸ್ಕೃತಿಕ ಪರಿಸರದೊಳಗೆ ಬೆಳೆದ ಕುವೆಂಪು ಅಲ್ಲಿನ ಜೀವನವನ್ನು ತೀರಾ ಹತ್ತಿರದಿಂದ ನೋಡಿದ್ದಾರೆ. ಅದನ್ನು ಸಾಹಿತ್ಯದ ವಸ್ತುವಾಗಿಸಿಕೊಂಡಿದ್ದಾರೆ ಕೂಡ. ಪ್ರಕೃತಿಯ ಸೊಬಗಿಗೆ, ಸೌಂದರ್ಯಕ್ಕೆ, ಅದರ ಅಗಾಧತೆಗೆ, ಹಿರಿಮೆಗೆ ಸೋತು ಶರಣಾಗಿರುವಂತೆ, ಅಲ್ಲಿನ ಜನರ ನಡೆ–ನುಡಿ, ಆಚಾರ–ವಿಚಾರ, ಅಲ್ಲಿ ನಡೆಯುವ ಶೋಷಣೆಯ ವಿವಿಧ ನೆಲೆಗಳನ್ನು ವಿವರಿಸಿ, ಮುಖಾಮುಖಿಯಾಗುತ್ತಾ ಅದನ್ನು ಅನಾವರಣಗೊಳಿಸಿದ್ದಾರೆ. 'ಮಲೆಗಳಲ್ಲಿ ಮದುಮಗಳು', 'ಕಾನೂರು ಹೆಗ್ಗಡತಿ' ಕಾದಂಬರಿಗಳು ಈ ಹಿನ್ನೆಲೆಯಲ್ಲಿ ಮೂಡಿಬಂದವುಗಳಾಗಿವೆ. 'ಬೆರಳ್‌ಗೆ ಕೊರಳ್', 'ಶೂದ್ರತಪಸ್ವಿ', 'ಶ್ಮಶಾನ ಕುರುಕ್ಷೇತ್ರ', 'ಜಲಗಾರ' ಮುಂತಾದ ನಾಟಕಗಳಲ್ಲಿ ಸಮಕಾಲೀನ ಸಂದರ್ಭದ ಸಂಘರ್ಷವೊಂದನ್ನು ಪಾರಂಪರಿಕ ಕಥನದಲ್ಲೂ ಇರುವುದನ್ನು ಗುರುತಿಸಿ ಅದನ್ನು ಮುರಿದು ಕಟ್ಟಿದ್ದಾರೆ. ಕಾವ್ಯಗಳಲ್ಲಿ ಹೆಚ್ಚಾಗಿ ಪ್ರಕೃತಿಯ ವರ್ಣನೆ ಕಂಡುಬಂದರೂ ಅದು ಸೌಂದರ್ಯೋಪಾಸನೆ ಮಾತ್ರವಾಗಿರದೆ ಸಾಮಾಜಿಕ ವ್ಯವಸ್ಥೆಯೊಂದರ ವಿಡಂಬನೆಯ ಅಸ್ತ್ರವೂ ಆಗಿದೆ, ಪ್ರಕೃತಿ ಇಲ್ಲಿ ಚೈತನ್ಯದ ಜೊತೆಗೆ ಹೊಸದರ್ಶನವೊಂದನ್ನು ಮಾಡಿಸುತ್ತದೆ. ಅವರ ಇತರೆ ಕವಿತೆಗಳು ಹಲವು ವಿಷಯವಸ್ತುಗಳನ್ನೊಳಗೊಂಡಿದ್ದು ಸಾಮಾಜಿಕ ಶೋಷಣೆಯ ಪ್ರತಿಭಟನೆಯೂ ಇಲ್ಲಿ ಕಂಡುಬರುತ್ತದೆ. ಹಾಗೆಯೇ ಸಂಪ್ರದಾಯ, ಕಟ್ಟುಕಟ್ಟಳೆಗಳನ್ನು ಮೀರಿ ಬೆಳೆದು ವಿಶ್ವಮಾನವ ಪಥದೆಡೆಗೂ ಕೊಂಡೊಯ್ಯುತ್ತದೆ. 'ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ' 'ವಿಚಾರ ಕ್ರಾಂತಿಗೆ ಆಹ್ವಾನ' ಎಂಬ ಲೇಖನಗಳು ಕುವೆಂಪುರವರ ವೈಚಾರಿಕ ಪ್ರಜ್ಞೆಯನ್ನು ಹೇಳುತ್ತದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯು ಅಪಾರ ವಸ್ತು ವೈವಿಧ್ಯತೆಯಿಂದ, ಪಾತ್ರಚಿತ್ರಣದಿಂದ ನಮ್ಮ ಗಮನ ಸೆಳೆಯುತ್ತದೆ. ಕಾದಂಬರಿಯ ಪ್ರಾರಂಭದಲ್ಲಿ ಕುವೆಂಪು ಓದುಗರಿಗಾಗಿ 'ಇಲ್ಲಿ ಯಾರು ಮುಖ್ಯರಲ್ಲ, ಯಾರೂ ಅಮುಖ್ಯರಲ್ಲ, ಯಾವುದು ಯಃಕಶ್ಚಿತವಲ್ಲ!' ಎಂದು ಹೇಳುವ ಮಾತು ಅರ್ಥಪೂರ್ಣವಾಗಿದೆ. ಕಾದಂಬರಿಯಲ್ಲಿ ಬರುವ ನಾಯಿಗುತ್ತಿ, ಚಿನ್ನಮ್ಮ, ಮುಕುಂದಯ್ಯ, ಪೀಂಚಲು, ಸುಬ್ಬಣ್ಣ ಹೆಗ್ಗಡೆ, ಬೆಟ್ಟಳ್ಳಿ ಕಲ್ಲಯ್ಯ, ನಾಗತ್ತೆ, ತಿಮ್ಮ, ಕಾಳಿ, ಭೆರಮೈಹೆಗ್ಗಡೆ, ಶಂಕರಪ್ಪ ಹೆಗ್ಗಡೆ, ಹೀಗೆ ಪ್ರತಿಯೊಂದು ಪಾತ್ರವು ಮುಖ್ಯವಾಗುತ್ತದೆ. ಈ ಪಾತ್ರಗಳೆಲ್ಲವೂ ಜೀವನದ ವಿವಿಧ ಮುಖಗಳನ್ನು ನಮಗೆ ತೆರೆದುತೋರಿಸುತ್ತವೆ. "ಬೆಟ್ಟ ಗುಡ್ಡಗಳ ನಡುವೆ, ದಟ್ಟಾರಣ್ಯದ ಕಂದರದೊಳಗೆ, ಸಂಪರ್ಕಸಾಧನ ಅಷ್ಟಾಗಿ ಸುಧಾರಿಸಿಲ್ಲದ, ಬಾಹ್ಯ ಜನಾಂಗದ ಸಂಸ್ಕೃತಿಯ ಪ್ರಭಾವ ಅಷ್ಟಾಗಿ ನುಸುಳಲು ಸಾಧ್ಯವಿಲ್ಲದ, ಒಂದು ಮಿತ ಪ್ರದೇಶದ ಜನಾಂಗದ ಜೀವನವನ್ನು ವಸ್ತುವಾಗಿ ಉಳ್ಳ ಈ ಕಾದಂಬರಿ ಮೊದಲಿಗೆ ಪ್ರಾದೇಶಿಕ ಕಾದಂಬರಿ ಎನಿಸಿದರೂ, ಒಕ್ಕಲಿಗರ ಜನಾಂಗದೊಂದಿಗೆ ಬೆರೆತ ಅಸ್ಪೃಶ್ಯರ ಬದುಕು ಹೊಟ್ಟೆಯ ಪಾಡಿಗಾಗಿ ಗಟ್ಟದ ಕೆಳಗಿನಿಂದ ಮೇಲೇರಿ ಬಂದ ಕರಾವಳಿಯ ಮಕ್ಕಳು

ಎಲ್ಲವೂ ಇಲ್ಲಿ ಮಲೆನಾಡಿನ ಸುಂದರ ನಿಸರ್ಗದೊಡನೆ ಒಟ್ಟಾಗಿ ಸ್ಪಂದಿಸಿ ಪ್ರತಿಕ್ರಿಯಿಸುವುದರಿಂದ ಇದು ಪ್ರಾದೇಶಿಕತೆಯನ್ನು ಮೀರಿ ಮಹಾಕಾದಂಬರಿ ಎನಿಸುತ್ತದೆ"[1]

ಕಾದಂಬರಿಯು ಮದುವೆ, ಪ್ರೀತಿ ಗಂಡು-ಹೆಣ್ಣಿನ ನಡುವಿನ ಸಂಬಂಧ, ಕೌಟುಂಬಿಕ ಕಲಹ, ಪ್ರಕೃತಿಯೊಂದಿಗಿನ ಮನುಷ್ಯನ ಸಂಬಂಧ, ಧಾರ್ಮಿಕ ನಂಬಿಕೆಗಳು, ವಸಾಹತುಶಾಹಿಯ ಆಗಮನ, ಮತಾಂತರ ಪ್ರಕ್ರಿಯೆ, ಜಾತಿವ್ಯವಸ್ಥೆ, ಪುರೋಹಿತಶಾಹಿಯ ದೌರ್ಜನ್ಯ, ಊಳಿಗಮಾನ್ಯ ಪದ್ಧತಿಯ ಹುನ್ನಾರಗಳು ಹೀಗೆ ಹಲವು ವಿಷಯಗಳನ್ನೊಳಗೊಂಡು ಮಲೆನಾಡಿನ ಪರಿಸರವೊಂದನ್ನು ನಮ್ಮ ಮುಂದೆ ತೆರೆದಿಡುತ್ತದೆ. ಕೆಲವೊಂದು ವಿಷಯಗಳ ಕಡೆಗೆ ಇಲ್ಲಿ ಗಮನಹರಿಸಲಾಗಿದೆ.

ಕಾದಂಬರಿಯ ಪ್ರಾರಂಭದಲ್ಲೇ ಕಾಣಿಸಿಕೊಳ್ಳುವ ನಾಯಿಗುತ್ತಿ ಪ್ರಕೃತಿಯ ಕೂಸಾಗಿ ಅದರ ಜೊತೆಗೆ ಗಾಢ ಸಂಬಂಧವುಳ್ಳವನಾಗಿ ಕಂಡುಬರುತ್ತಾನೆ. ತನ್ನ ಉದ್ದೇಶದ ಈಡೇರಿಕೆಗಾಗಿ ಸಿಂಬಾವಿಯಿಂದ ಬೆಟ್ಟಳ್ಳಿಗೆ ಪ್ರಯಾಣಿಸುವ ಸಂದರ್ಭದಲ್ಲಿ ದಟ್ಟ ಕಾಡನ್ನು ಕತ್ತಲು ಆವರಿಸಿದ್ದಾಗಲೂ ಹಿಂಜರಿಯದೆ ಮುನ್ನಡೆಯುವ ಗುತ್ತಿ ಆಶ್ಚರ್ಯ ಮೂಡಿಸುತ್ತಾನೆ. "ನಾಗರೀಕರಿಗೆ ಭೀಕರವಾಗಿ ಕಾಣುವ ವರ್ಷಕಾಲದ ಆ ಭಯಂಕರ ಪರ್ವತಾರಣ್ಯದ ರುದ್ರಪ್ರಕೃತಿ ಅವನಿಗೆ ಬಹುಕಾಲದ ಪರಿಚಯದಿಂದ ಸಾಧಾರಣವಾಗಿತ್ತು. ಅವನೂ ಆ ಪ್ರಕೃತಿಯ ಒಂದಂಶವಾಗಿದ್ದನು. ಬೆಟ್ಟದಲ್ಲಿ ಬಂಡೆಯಂತೆ, ಕಾಡಿನಲ್ಲಿ ಮರದಂತೆ ಅದರ ಒಂದಂಗವಾಗಿದ್ದನು"[2] ಎಂಬುದು ಪ್ರಕೃತಿ ಗುತ್ತಿಗೆಷ್ಟು ಚಿರಪರಿಚಿತವಾಗಿತ್ತೆಂಬುದನ್ನು ತಿಳಿಸುತ್ತದೆ. ತೊರೆಯ ಭೋರ್ಗರೆತದಿಂದ ನೀರಿನ ಮಟ್ಟವನ್ನು, ವಾಸನೆಯಿಂದ ತನ್ನ ಹುಲಿಯನನ್ನು, ಅಂದಾಜಿನಿಂದ ದಾರಿಯನ್ನು ಗುರುತಿಸಬಲ್ಲ ಗುತ್ತಿ ಸಾಬಿಯ ಜೊತೆಗಿನ ಗಲಭೆಯಿಂದಾಗಿ ಪೋಲೀಸರ ಕೈಗೆ ಸಿಕ್ಕಿ ಬಿದ್ದಾಗಲೂ ಕೊನೆಗೆ ಅಪಾಯದಿಂದ ಪಾರಾಗುವುದು ಈ ಪ್ರಕೃತಿಯ ಮಡಿಲಿನಲ್ಲೇ ಆಗಿದೆ. ಪ್ರಕೃತಿಯಲ್ಲಿ ಒಂದಂಶವಾಗಿ ತಪ್ಪಿಸಿಕೊಂಡ ಗುತ್ತಿಯನ್ನು ಹುಡುಕಲು ಪೋಲೀಸರೂ ಸಹ ಅಸಮರ್ಥರಾಗುವಂತಹದ್ದನ್ನು ನೋಡಬಹುದಾಗಿದೆ.

ಗುತ್ತಿಯು ಹಲವು ಸಮಸ್ಯೆಗಳನ್ನು ಎದುರಿಸುವುದು ತಾನು ಪ್ರೀತಿಸಿದ ತಿಮ್ಮಿಯನ್ನು ಕೈ ಹಿಡಿಯುವ ಕಾರಣಕ್ಕಾಗಿಯೇ. ಅತ್ತೆಯ ಮಗಳಾದರೂ, ತಿಮ್ಮಿ ಮತ್ತವಳ ಕುಟುಂಬದ ಸಮ್ಮತವಿದ್ದರೂ ಅವಳನ್ನು ಅಪಹರಿಸಿಕೊಂಡು ಹೋಗಬೇಕಾದ ಸಂದಿಗ್ಧತೆಯಲ್ಲಿ ಗುತ್ತಿ ಸಿಲುಕುವುದಕ್ಕೆ ಕಾರಣ ಅಲ್ಲಿನ ಊಳಿಗಮಾನ್ಯ ಪದ್ಧತಿಯೇ ಆಗಿದೆ. ಬೆಟ್ಟಳ್ಳಿಕಲ್ಲಯ್ಯಗೌಡರ ಒಕ್ಕಲಾಗಿರುವ ತಿಮ್ಮಿ ಗುತ್ತಿಯನ್ನು ಮದುವೆಯಾದರೆ ಸಿಂಬಾವಿ ಭರಮೈಹೆಗ್ಗಡೆಯ ಒಕ್ಕಲಿಗೆ ಸೇರಿದಂತಾಗುವುದರಿಂದ ತಮಗೆಲ್ಲಿ ಒಂದು ಆಳು ಕಡಿಮೆಯಾಗುತ್ತದೆಯೋ ಎಂಬ ಕಾರಣಕ್ಕಾಗಿ ಹಾಗೆಯೇ ಪ್ರತಿಷ್ಠೆಯ ಕಾರಣಕ್ಕಾಗಿ ಗೌಡರು ತಿಮ್ಮಿಯ, ಮತ್ತವಳ ಮನೆಯವರ ಅಭಿಪ್ರಾಯವನ್ನು ಲೆಕ್ಕಿಸದೆ ಬಚ್ಚನಿಗೆ ಮದುವೆ ಮಾಡಲು ಮುಂದಾಗುತ್ತಾರೆ. ಆ ಸಂದರ್ಭದಲ್ಲೇ ಗುತ್ತಿ ತಿಮ್ಮಿಯನ್ನು ಅಪಹರಿಸಲು ಮುಂದಾಗುವುದು. ಇಲ್ಲಿ

ಊಳಿಗಮಾನ್ಯ ಪದ್ಧತಿಯು ವ್ಯಕ್ತಿಯ ಆಸೆ, ಆಕಾಂಕ್ಷೆಗಳಿಗೆ ಕಿಂಚಿತ್ತು ಬೆಲೆಕೊಡದೆ ಅವರ ಸ್ವಾತಂತ್ರ್ಯವನ್ನು ಕಸಿದುಕೊಂಡು ಅವರನ್ನು ಜೀವನಪೂರ್ತಿ ಜೀತಗಾರರನ್ನಾಗಿ ಮಾಡಿಕೊಳ್ಳಲು ನಡೆಸುವ ಹುನ್ನಾರ, ಕ್ರೌರ್ಯ ಕಾದಂಬರಿಯಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತಲೇ ಇರುತ್ತದೆ. ಅಪಹರಣ ಸಂದರ್ಭದಲ್ಲೇ ಊರ ಜನರೆಲ್ಲ ಹೋಗಲು ಭಯಪಡುವ ಹುಲಿಕಲ್ಲು ನೆತ್ತಿಯನ್ನು ಗುತ್ತಿ ತಿಮ್ಮಿಯೊಡನೆ ಹತ್ತುತ್ತಾನೆ. ಕಾನೂರು ಹೆಗ್ಗಡತಿಯಲ್ಲಿ ಬರುವ ಹೂವಯ್ಯ ಪ್ರಕೃತಿ ಸೌಂದರ್ಯವನ್ನು ಹೇಗೆ ಆಸ್ವಾದಿಸುತ್ತಾನೋ ಹಾಗೆಯೇ ತಿಮ್ಮಿಯೂ ಆಸ್ವಾದಿಸುತ್ತಾಳೆ. ಆದರೆ ಅಭಿವ್ಯಕ್ತಿಯ ಕ್ರಮ ಬೇರೆಯಷ್ಟೇ.

ಗಂಡು - ಹೆಣ್ಣಿನ ನಡುವಿನ ಪ್ರೀತಿಯು ಸಾಮಾಜಿಕ ಕಟ್ಟುಕಟ್ಟಳೆಗಳನ್ನಾಗಲೀ, ಸಂಪ್ರದಾಯವನ್ನಾಗಲೀ ಲೆಕ್ಕಿಸದೇ ಮೀರುವ ಕ್ರಮವೊಂದು ಕಾದಂಬರಿಯಲ್ಲಿ ಚಿನ್ನಮ್ಮ-ಮುಕುಂದಯ್ಯ ಜೋಡಿಯ ಮೂಲಕ ವ್ಯಕ್ತವಾಗುತ್ತದೆ. ಗುತ್ತಿ-ತಿಮ್ಮಿಯರು ಇಂತಹದ್ದೊಂದು ಪ್ರೀತಿಯ ಕಾರಣದಿಂದಾಗಿಯೇ ವ್ಯವಸ್ಥೆಯೊಂದಕ್ಕೆ ವಿರುದ್ಧವಾಗಿ ನಡೆದರೂ, ಜಾತಿ, ಅಂತಸ್ತಿನ ಕಾರಣದಿಂದಾಗಿ ಚಿನ್ನಮ್ಮ - ಮುಕಂದಯ್ಯನ ಜೋಡಿ ಮೇಲಿದ್ದು, ಕಟ್ಟಳೆಗಳು, ನಿಯಮಗಳು ಹೆಚ್ಚಾಗಿ ಇವರಿಗೇ ಅನ್ವಯಿಸುತ್ತದೆ. ಅದರಲ್ಲೂ ಮದುವೆಯ ಸಂದರ್ಭದಲ್ಲಿ ಚಿನ್ನಮ್ಮ ಒಬ್ಬ ಹೆಣ್ಣುಮಗಳಾಗಿ ತೋರುವ ಧೈರ್ಯ ಅವಳಿಗರಿವಿಲ್ಲದಂತೆಯೇ ವ್ಯವಸ್ಥೆಯೊಂದಕ್ಕೆ ತೋರುವ ಪ್ರತಿರೋಧವು ಆಗಿದೆ.

19-20ನೇ ಶತಮಾನದಲ್ಲಿ ವಸಾಹತುಶಾಹಿಯ ಪರಿಣಾಮವಾಗಿ ಬಂದ ಆಧುನಿಕತೆಯು ಮಲೆನಾಡಿನ ಪರಿಸರಕ್ಕೆ ಕಾಲಿಟ್ಟಾಗ ಅಲ್ಲಿನ ಜನರಲ್ಲಿ ಉಂಟು ಮಾಡಿದ ತಲ್ಲಣಗಳನ್ನು, ಹಲವು ಸ್ಥಿತ್ಯಂತರಗಳನ್ನು ಕಾದಂಬರಿಯಲ್ಲಿ ಕಾಣಬಹುದಾಗಿದೆ. ಇಲ್ಲಿನ ಮತಾಂತರ ಪ್ರಕ್ರಿಯೆಯಲ್ಲಿ ಕಂಡು ಬರುವ ಪಾದ್ರಿಗಳು ಹೊತ್ತು ತಂದ ಸ್ಕೂಲು, ಆಸ್ಪತ್ರೆ, ಬೈಬಲ್ಲು, ಬೈಸಿಕಲ್ಲು, ಲಾಟೀನು ಇವುಗಳು ಮಲೆನಾಡಿನ ಜೀವನವನ್ನು ಪ್ರವೇಶಿಸಿ ಕುತೂಹಲ ಗಾಬರಿಗಳನ್ನುಂಟು ಮಾಡುತ್ತವೆ. ಎಲ್ಲದಕ್ಕಿಂತ ಹೆಚ್ಚಾಗಿ ಪಾದ್ರಿ ಜೀವರತ್ನಯ್ಯ ಮತಾಂತರಗೊಳಿಸಲು ಮಾಡುವ ಹುನ್ನಾರುಗಳು ಇಡೀ ಪರಿಸರದಲ್ಲಿ ಆತಂಕ, ತಲ್ಲಣಗಳನ್ನುಂಟುಮಾಡುತ್ತದೆ. “ಜೀವರತ್ನಯ್ಯನ ಉಪದೇಶ ಮತ್ತು ಆಮಿಷಗಳು ಫಲಕಾರಿಯಾಗಲು ಮುಖ್ಯ ಕಾರಣ ಹಿಂದೂ ಧರ್ಮದಲ್ಲಿನ ಪುರೋಹಿತಶಾಹಿಯ ಅಮಾನವೀಯ ಮೌಲ್ಯಗಳೇ. ಹಿಂದೂ ಧರ್ಮದ ಅನಾಚಾರ, ಅವಿವೇಕ, ಸಂಕುಚಿತ ಮನೋಭಾವ, ಜಾತಿಮತ ಪಕ್ಷಪಾತ, ಶೂದ್ರರ ದೈನ್ಯ, ಅಧೋಗತಿ, ಕಲ್ಲು, ಮಣ್ಣು, ಮರ, ದೈವಗಳ ಪೂಜೆ ಇತ್ಯಾದಿಗಳನ್ನು ಕ್ರೈಸ್ತಮತದ ಪರೋಪಕಾರ, ಅನುಕಂಪನ ರೀತಿ, ತ್ಯಾಗಭಕ್ತಿ, ಉದ್ಧಾರಕ ಸಾಮರ್ಥ್ಯಗಳನ್ನು ಹೀಗೆ ಎರಡು ಧರ್ಮಗಳ ಧಾರ್ಮಿಕ ಧೋರಣೆಗಳನ್ನು ಮುಖಾಮುಖಿಯಾಗಿಸಿರುವಲ್ಲಿ ಪುರೋಹಿತಶಾಹಿ ಅಮಾನವೀಯತೆ ಮತ್ತು ಕ್ರೈಸ್ತ ಧರ್ಮದ ಹುನ್ನಾರುಗಳು ಒಮ್ಮೆಗೆ ನಮ್ಮ ಗಮನಕ್ಕೆ ಬರುತ್ತವೆ. ಹಾಗೆ

ಎರಡು ಧರ್ಮಗಳ ಮುಖಾಮುಖಿಯಾಗಿರುವಲ್ಲಿ ಆಧುನಿಕ ಜಗತ್ತಿನ ಚಿನ್ನಪ್ಪ ಮತ್ತು ದೇವಯ್ಯನಂತಹ ಜಾಗೃತ ಪ್ರಜ್ಞೆಯ ಯುವಕರನ್ನು ಮತಾಂತರದ ಖೆಡ್ಡಕ್ಕೆ ನೇಟಿವ್ ಪಾದ್ರಿಯೊಬ್ಬ ಕೆಡಹುತ್ತಿರುವ ಚಿತ್ರರೂಕ್ಷವಾದದ್ದು"[3] ಆದರೆ ಪಾದ್ರಿಯ ಪ್ರಯತ್ನಗಳೆಲ್ಲವು ವಿಫಲವಾಗುವುದನ್ನು ಕಾದಂಬರಿಯಲ್ಲಿ ನೋಡಬಹುದಾಗಿದೆ. ಭಾರತೀಯ ಮತ್ತು ಪಾಶ್ಚಾತ್ಯ ಪುರೋಹಿತಶಾಹಿಯ ಎರಡು ಧೋರಣೆಗಳ ಬಗೆಗೂ ವ್ಯಂಗ್ಯಗಳು, ಅವುಗಳ ದೋಷಗಳನ್ನು ಇಲ್ಲಿ ಎತ್ತಿ ತೋರಿಸಲಾಗಿದೆ. ಹೀಗೆ ಹಲವಾರು ಅಂಶಗಳು ಅಂದಿನ ಮಲೆನಾಡಿನ ಪರಿಸರದ ಚಿತ್ರಣವನ್ನು ನಿರೂಪಿಸುತ್ತವೆ.

'ಕಾನೂರು ಹೆಗ್ಗಡತಿ' ಕಾದಂಬರಿಯೂ ಮಲೆನಾಡಿನ ಜೀವನವನ್ನು ಚಿತ್ರಿಸುವ ಕಾದಂಬರಿಯಾಗಿದೆ. ಇಲ್ಲಿ ಕಂಡುಬರುವ ಮುಖ್ಯ ಪಾತ್ರಗಳಾದ ಹೂವಯ್ಯ, ರಾಮಯ್ಯ, ನಗರದಲ್ಲಿ ಆಧುನಿಕ ಶಿಕ್ಷಣವನ್ನು ಪಡೆದು ಹಳ್ಳಿಯ ಜೀವನಕ್ಕೆ ವಾಪಸ್ಸಾಗಿರುತ್ತಾರೆ. ಆಧುನಿಕ ಶಿಕ್ಷಣ ಅವರ ವರ್ತನೆಗಳಲ್ಲಿ, ಅಭಿರುಚಿ, ನೋಡುವ ಕ್ರಮ, ಪ್ರಭಾವ ಬೀರಿರುವುದನ್ನು ನೋಡಬಹುದು. ಹಳ್ಳಿಗೆ ಹಿಂದಿರುಗಿದ ಮೇಲೆಯೇ ಅಲ್ಲಿನ ಸಾಮಾಜಿಕ ವ್ಯವಸ್ಥೆಯ ಅರಿವು ಅವರಿಗೆ ಉಂಟಾಗುವುದು. ಅಲ್ಲಿನ ಜನರು ಆಚರಣೆಯ ಹೆಸರಿನಲ್ಲಿ ಅನುಸರಿಸುತ್ತಿರುವ ಅಂಧಾನುಕರಣೆ, ಮೌಢ್ಯತೆ, ಕಂದಾಚಾರ, ಪುರೋಹಿತಶಾಹಿಯ ದೌರ್ಜನ್ಯ ಇವೆಲ್ಲವುಗಳನ್ನು ರಾಮಯ್ಯನಿಗಿಂತಲೂ ಹೂವಯ್ಯ ಪ್ರಬಲವಾಗಿ ವಿರೋಧಿಸುತ್ತಾನೆ, ಪ್ರಶ್ನಿಸುತ್ತಾನೆ. ಜನರಲ್ಲಿ ಅರಿವು ಮೂಡಿಸಲು ಪ್ರಯತ್ನಿಸುತ್ತಾನೆ. ಊಳಿಗಮಾನ್ಯ ವ್ಯವಸ್ಥೆಯ ಶೋಷಣೆಯನ್ನು ಖಂಡಿಸುತ್ತಾನೆ. ಹಾಗಾಗಿ ಇಡೀ ಕಾದಂಬರಿಯಲ್ಲಿ ಹೂವಯ್ಯ ಕೇಂದ್ರಪಾತ್ರವಾಗಿ, ವೈಚಾರಿಕ ವ್ಯಕ್ತಿಯಾಗಿ ಕಂಡುಬರುತ್ತಾನೆ.

ಕಾದಂಬರಿಯಲ್ಲಿ ಬರುವ ವೆಂಕಪ್ಪಯ್ಯ ಜೋಯಿಸ ಪುರೋಹಿತಶಾಹಿ ವರ್ಗಕ್ಕೆ ಸೇರಿದವನಾಗಿದ್ದು, ದೇವರಪೂಜೆ, ನಿಮಿತ್ತ ನೋಡುವುದು, ಭವಿಷ್ಯ ಹೇಳುವುದು, ಜಾತಕ ಬರೆಯುವುದು ಮತ್ತು ನೋಡುವುದು, ಲಗ್ನಕ್ಕೆ ಮೂಹೂರ್ತ ಇಟ್ಟು ಕೊಡುವುದು, ಶೂದ್ರರ ಭೂತಾದಿಗಳಿಗೆ ರಕ್ತ ಬಲಿಕೊಡುವ ಮೊದಲು ಹಣ್ಣುಕಾಯಿ ಮಾಡುವುದು, ಮಂತ್ರದಿಂದ ದೆವ್ವಗಳನ್ನು ಬಿಡಿಸುವುದು ಮತ್ತು ಹಿಡಿಸುವುದು, ಇಂತಹ ಕಾರ್ಯಗಳಲ್ಲಿ ತೊಡಗಿದ್ದು ಜನರ ನಂಬಿಕೆಗಳನ್ನು ತನ್ನ ಸ್ವಾರ್ಥಕ್ಕೆ ಬಳಸಿಕೊಂಡು ಅವರನ್ನು ಅಂಧಕಾರಕ್ಕೆ ನೂಕಿದನು. ಹೂವಯ್ಯನು ಇವನ ಎಲ್ಲ ಮಂತ್ರ–ತಂತ್ರಗಳನ್ನು ವಿರೋಧಿಸಿ ಜೋಯಿಸರ ಕೆಂಗಣ್ಣಿಗೆ ಗುರಿಯಾಗಿದ್ದನು. ಇಂತಹ ಪುರೋಹಿತರುಗಳೇ ಸಾಮಾಜಿಕ ಪರಿಸರವನ್ನು ಹಾಳುಮಾಡುತ್ತಿದ್ದಾರೆಂಬುದು ಅವನ ಬಲವಾದ ನಂಬಿಕೆಯೂ ಆಗಿತ್ತು.

ಒಂದು ಸಲ ಹೂವಯ್ಯ ದಯ್ಯಕ್ಕೆ ಬಲಿಯಾಗಬೇಕಿದ್ದ ಒಂದು ಹೋತವನ್ನು ಹಠದಿಂದ ಬಿಡಿಸಿ ತಾನೇ ಸಾಕಿಕೊಳ್ಳುತ್ತಾನೆ. ಅಲ್ಲಿನ ಜನರಿಗೆ ಇದು ಆತಂಕವನ್ನುಂಟುಮಾಡಿದರೂ ಹೂವಯ್ಯ ಮಾನವೀಯತೆಯನ್ನು ಮೆರೆಯುತ್ತಾನೆ. ಮಂತ್ರಿಸಿಕೊಟ್ಟ ತಾಯಿತವನ್ನು ಕಟ್ಟಿಕೊಂಡಿದ್ದ ವಾಸುವಿನಿಂದ

ಅದನ್ನು ತೆಗೆದೆಸೆದಿರುತ್ತಾನೆ. ಈ ಎಲ್ಲ ಸಂದರ್ಭಗಳನ್ನು ಅವಲೋಕಿಸುತ್ತಾ ಚಂದ್ರೇಗೌಡ, ವೆಂಕಪ್ಪಯ್ಯ ಜೋಯಿಸರು ಆಡುವ ಮಾತುಗಳು ಅವರ ಕುರುಡು ನಂಬಿಕೆಗಳನ್ನು, ಮತಾಂಧತೆಯನ್ನು ತಿಳಿಸುತ್ತದೆ. ಜೋಯಿಸ ಹೇಳುವ ಮಾತುಗಳಿಂತಿವೆ: "ನಾನು ಹೇಳಿದ್ದೆ ನಿನಗೆ ಮೊದಲೇ, ಈಗಿನ ವಿದ್ಯಾಭ್ಯಾಸ ಹುಡುಗರನ್ನು ಹಾಳು ಮಾಡಿಬಿಡುತ್ತದೆ ಎಂದು! ದೇವರು ದಿಂಡಿರು ಭಕ್ತಿ ಗಿಕ್ತಿ ಎಲ್ಲಾ ನಿರ್ನಾಮ! ಜೊತೆಗೆ ನೂರಾರು ಹವ್ಯಾಸಗಳನ್ನು ಬೇಗನೆ ಕಲಿತು ಬಿಡುತ್ತಾರೆ. ನಿನ್ನ ಮನೆ, ಜಮೀನು ಉಳಿಯಬೇಕಾದರೆ ಅವರ ಓದು ನಿಲ್ಲಿಸಿ, ಮದುವೆಗಿದುವೆ ಮಾಡಿ ಕೆಲಸಕ್ಕೆ ಹಚ್ಚು, ಸಂಸಾರ ತಲೆಗೆ – ತಾಗಿದರೆ ಆಗ ಬುದ್ಧಿ ಬರುತ್ತದೆ. ಶೂದ್ರಮಕ್ಕಳಿಗೆಲ್ಲ ಉಪನಿಷತ್ತು, ಭಗವದ್ಗೀತೆ ಗಂಧವಾದರೂ ಗೊತ್ತಾಗುತ್ತದೆಯೇ? ನಮಗೆ ಗೊತ್ತಾಗೋದಿಲ್ಲ".[4] ಈ ಮಾತಿನಲ್ಲಿ ಪ್ರಶ್ನಿಸುವ ಮನಸ್ಸುಗಳನ್ನು ಚಿವುಟಿಹಾಕುವ ತಂತ್ರಗಳಿರುವುದರ ಜೊತೆಗೆ ಶೂದ್ರರು ಜ್ಞಾನಾರ್ಜನೆಯನ್ನು ಪಡೆಯುವುದನ್ನೇ ಪ್ರಶ್ನಿಸಲಾಗುತ್ತದೆ. ಮುಂದುವರಿದು ಹೇಳುವ ಮಾತುಗಳು ಜೋಯಿಸನ ಕ್ಷುಲ್ಲಕ ಬುದ್ಧಿಯನ್ನು ಎತ್ತಿ ತೋರಿಸುತ್ತದೆ. ಅವರನ್ನು ಓದು ಬಿಡಿಸಿ ಮನೇ ಕೆಲಸಕ್ಕೆ ಹಾಕಬೇಕೆಂಬ ಚಂದ್ರೇಗೌಡನ ಉದ್ದೇಶಕ್ಕೆ ಸಹಕರಿಸುತ್ತಾ "ಹಾಗೆ ಮಾಡಿದರೆ ನಿನ್ನ ಮನೆ ಉಳಿಯುತ್ತದೆ ನೋಡು, ದೇವರ ಕೋಪಕ್ಕಾದರೂ ಪಾತ್ರರಾಗಬಹುದು – ಏಕೆಂದರೆ ಅವನು ದಯಾಸಾಗರ, ಕರುಣಾಶಾಲಿ. ಆದರೆ ಈ ಭೂತ ದೆವ್ವಗಳ ಸಿಟ್ಟಿಗೆ ಬಿದ್ದರೆ ಉಳಿಗಾಲವಿಲ್ಲ"[5] ಎಂದು ಎಚ್ಚರಿಸುತ್ತಾನೆ. ಇಡೀ ಕಾದಂಬರಿಯಲ್ಲಿ ವೆಂಕಪ್ಪಯ್ಯ ಜೋಯಿಸರು ಹತ್ತಾರು ಬಾರಿ ಕಾಣಿಸಿಕೊಳ್ಳುತ್ತಾರೆ. ಆದರೆ ಅವರು ಬೀರುವ ಪ್ರಭಾವ ಪರಿಣಾಮಕಾರಿಯಾದುದಾಗಿದೆ.

ಕಾದಂಬರಿಯ ಕೊನೆಯ ಭಾಗದಲ್ಲಿ ಸುಮಾರು ಹತ್ತು ವರ್ಷಗಳ ನಂತರ ಬದಲಾಗಿರುವ ಪರಿಸರವನ್ನು ಗುರುತಿಸಲಾಗಿದೆ. ಎರಡು ಊರುಗಳ ಮಧ್ಯೆಯಿದ್ದ ಕಳ್ಳಂಗಡಿ ಕುಸಿದುಬಿದ್ದಿತ್ತು. ಹೊಸದಾಗಿ ಆಸ್ಪತ್ರೆ, ಸ್ಕೂಲು, ಪೋಸ್ಟಾಫೀಸು, ಅಂಗಡಿಗಳು ತಲೆಯೆತ್ತಿದ್ದವು; ಬಸ್ಸಿನ ಪ್ರವೇಶವಾಗಿತ್ತು. ವೃತ್ತ ಪತ್ರಿಕೆಗಳು ಬರುತ್ತಿದ್ದವು. ಕೆಲಸದ ಆಳುಗಳು ಚೊಕ್ಕಟವಾಗಿ ಬದುಕತೊಡಗಿದ್ದರು. ಅವರ ಮಕ್ಕಳು ಅಕ್ಷರಸ್ಥರಾಗತೊಡಗಿದರು ಮುಂತಾಗಿ ಆಧುನಿಕತೆಯು ಬಲವಾಗಿ ಹೆಜ್ಜೆಯೂರಿ ಹಲವು ಉತ್ತಮ ಬದಲಾವಣೆಗಳನ್ನು ತಂದಿದ್ದನ್ನಿಲ್ಲಿ ಗುರುತಿಸಬಹುದಾಗಿದೆ. ಮಲೆನಾಡಿನ ಪರಿಸರದಲ್ಲಿ ನಡೆದ ಹಲವು ಸ್ಥಿತ್ಯಂತರಗಳನ್ನು ಕುವೆಂಪು ಗುರುತಿಸುವುದನ್ನು ನೋಡಬಹುದು.

ಕುವೆಂಪುರವರಿಗೆ ಪ್ರಕೃತಿಯು ಸ್ಫೂರ್ತಿಯ ಸೆಲೆ, ಚೈತನ್ಯಶಕ್ತಿಯೂ ಆಗಿರುವಂತೆ, ಹೊಸದೊಂದು ದರ್ಶನವನ್ನು ಮೂಡಿಸುತ್ತದೆ. ಇಲ್ಲಿ ಹಲವು ಸಿದ್ಧರೂಪಗಳನ್ನು ಹೊಡೆದು, ಸಾಂಪ್ರದಾಯಿಕತೆಯನ್ನು ಮೀರುವುದನ್ನು ಕಾಣಬಹುದಾಗಿದೆ.

"ಸೊಬಗ ನನ್ನಿ ಎಂದು ಸಾರಿ;
ನನ್ನಿಯ ಸೊಬಗೆಂದು ತೋರಿ;
ಸೊಗದ ಸೊದೆಯ ತಿರೆಗೆ ಬೀರಿ
ಸುಗ್ಗಿ ಬರುತಿದೆ.

ಕುವೆಂಪು ಅವರ ಪರಿಸರವನ್ನು ಕುರಿತ ಕವನಗಳು ಮೇಲುನೋಟಕ್ಕೆ ಪ್ರಕೃತಿ ಆರಾಧನೆಯನ್ನು ಪ್ರಕಟಿಸಿದರೂ, ಅವುಗಳ ಆಳದಲ್ಲಿ ಅತ್ಯಂತ ಸಂಕೀರ್ಣವಾದ ಕಾಣ್ಕೆಯೇ ಪ್ರಧಾನ. ಇಂಥ ಕಾಣ್ಕೆ ಕುವೆಂಪು ಅವರ ಮುಖ್ಯ ಕಾವ್ಯಧ್ವನಿ. ಅಂದರೆ ಪ್ರಕೃತಿದರ್ಶನದ ಅವರ ಕೃತಿಗಳಲ್ಲಿ ಪ್ರಕಟವಾಗುವ ಸಾಂಪ್ರದಾಯಿಕ ಜಡಮೌಲ್ಯಗಳಿಗೆ ತೋರುವ ಪ್ರತಿರೋಧ ಮತ್ತು ಅದು ಹೊಸ ಜೀವನ ಮೌಲ್ಯಗಳ ಶೋಧದ ಪ್ರತಿರೂಪಕವಾಗುವುದು. ಈ ಬಗೆಯ ಕಾವ್ಯದ ವೈಶಿಷ್ಟತೆ"[6]

"ನಿನ್ನೆಯ ಸಂಜೆಯ ಮಳೆಯಲಿ ಮಿಂದು
ಕಳಕಳಿಸುವ ಹಸುರ್ಬಯಲಲಿ ಇಂದು
ಹೊಂಬಿಸಿಲಲಿ ಉರಿದಿದೆ ಜಲಬಿಂದು
ಸತ್ತಲೋ ಊರ್ವಶಿ ಸ್ವರ್ಗದಲಿ!
ಗಾಳಿಯ ಮಂಡಲ ಸ್ಫಟಿಕದವೋಲಿದೆ;
ನಭವೋ ನೀಲವಿತಾನವ ಹೋಲಿದೆ;
ಅಲ್ಲಲ್ಲಿಯೇ ಮುಗಿಲಿನ ಪಟ ತೇಲಿದೆ;
ವೈಕುಂಠವಿದೆ ನಿಸರ್ಗದಲ್ಲಿ!"[7]

ಲೌಕಿಕ-ಅಲೌಕಿಕಗಳ ತರತಮಗಳನ್ನು ಇಲ್ಲವಾಗಿಸಿ ನಮ್ಮ ಕಲ್ಪನೆಯ ಅಲೌಕಿಕ ಸಿರಿಸಂಪತ್ತನ್ನು ನಿಸರ್ಗದ ರಮಣೀಯ ಸೌಂದರ್ಯದಲ್ಲಿ ಕಾಣುವ ಕವಿಯ ಮನಸ್ಸು ಇಹಕ್ಕೆ ಹೆಚ್ಚು ಒತ್ತು ನೀಡುತ್ತಿದೆ. ಹಾಗೆ ಪ್ರಕೃತಿಯಲ್ಲಿ ಈ ರೀತಿಯ ಸೌಂದರ್ಯವನ್ನು ರಸಸ್ವಾದನೆ ಮಾಡುತ್ತಾ ಪ್ರಕೃತಿಯ ಮಡಿಲಿನಲ್ಲಿ ಜೀವಿಸುವುದಕ್ಕಿಂತ ಬೇರೆ ಗುರಿಯೇ ಇಲ್ಲ. ಇಲ್ಲಿಯೇ ಮುಕ್ತಿಯ ಆನಂದವೊಂದು ನಮಗೆ ಲಭಿಸುತ್ತಾವೆಂದು ಹೇಳುತ್ತಾರೆ. ಪ್ರಕೃತಿಯ ಅಣುಕಣದಲ್ಲೂ ಚೈತನ್ಯವನ್ನು ಗುರುತಿಸುತ್ತಾ ಕುವೆಂಪು 'ತೆಗೆ! ಜಡವೆಂಬುದೆ ಬರಿಸುಳ್ಳು!' ಎಂದು ಇಡೀ ಪ್ರಕೃತಿಯಲ್ಲಿ ಭಾವಸಂಚಾರವೊಂದನ್ನು ಗುರುತಿಸುತ್ತಾರೆ. ಹಾಗಾಗಿ ಮತ್ತೆ ಮತ್ತೆ ಆ ಪ್ರಕೃತಿಯ ಮಡಿಲಿಗೆ ತೆರಳುವಾಸೆಯೊಂದನ್ನು ವ್ಯಕ್ತಪಡಿಸುತ್ತಾರೆ. ಮುಂದಿನ ಪದ್ಯ ಇಂತಹ ಆಶಯಕ್ಕೊಂದು ನಿದರ್ಶನವಾಗಿದೆ.

"ಬೇಸರಾಗಿದೆ ಬಯಲುಸೀಮೆಯ ಬೋಳು ಬಯಲಿನ ಬಾಳಿದು
ಬಿಸಿಲು, ಬೇಸಗೆ, ಬೀಸುವುರಿಸೆಕೆ; ತಾಳಲಾರದ ಗೋಳಿದು!

ಹೋಗುವೆನು ನಾ ಹೋಗುವೆನು ನಾ ನನ್ನ ಒಲುಮೆಯ ಗೂಡಿಗೆ;

ಬಳಿಯ ತಿಂಗಳ ಸಿರಿಬನಂಗಳ ಮಲೆಯ ಮಂಗಳ ನಾಡಿಗೆ!"[8]

ಈ ಪದ್ಯದಲ್ಲಿ ಪ್ರಕೃತಿಯ ಚೆಲುವಿನ ತಾಣವಾದ, ಮಲೆನಾಡಿಗೆ ಹೋಗಲು ಕವಿ ಮನಸ್ಸು ಸದಾ ಹಂಬಲಿಸುತ್ತಿರುತ್ತದೆ. ಇದಕ್ಕೆ ಕಾರಣ ಬಯಲು ಸೀಮೆಯ ನಿಸ್ಸಾರವಾದ ಬದುಕೇ ಆಗಿದೆ. ಮಲೆನಾಡಿನ ಜೀವವೈವಿಧ್ಯತೆಯಾಗಲಿ, ಸೃಷ್ಟಿ ವೈಚಿತ್ರ್ಯವಾಗಲೀ, ಜೀವನ ಸೌಂದರ್ಯವಾಗಲೀ ಬಯಲು ಸೀಮೆಯ ಬೆಂಗಾಡು ಬದುಕಿನಲ್ಲಿ ಕಾಣಲು ಸಾಧ್ಯವಾಗದೆ ಒಲುಮೆಯ ಗೂಡಿಗೆ, ಮಳೆಯ ಬೀಡಿಗೆ, ನಂದನದ ಕಾಡಿಗೆ ಮಲೆಯ ನಾಡಿಗೆ ಹೋಗಲು ಹಾತೊರೆಯುವುದನ್ನಿಲ್ಲಿ ಕಾಣಬಹುದಾಗಿದೆ.

ಇದೇ ರೀತಿಯಲ್ಲಿ 'ಶಿಲಾತಪಸ್ವಿ', 'ಯಾವ ಕಾಲದ ಶಾಸ್ತ್ರವೇನು ಹೇಳಿದರೇನು?", 'ದೇವರು ಪೂಜಾರಿ' ಮುಂತಾದ ಹಲವಾರು ಕವಿತೆಗಳು ಸಾಮಾಜಿಕ ವ್ಯವಸ್ಥೆಯೊಂದರಲ್ಲಿನ ಜಡತೆಯನ್ನು ದೌರ್ಜನ್ಯವನ್ನು ವಿವರಿಸುತ್ತಾ, ವಿಡಂಬಿಸುತ್ತಾ ಬೇರೆ ದಾರಿಯೊಂದನ್ನು ತೋರುತ್ತದೆ. ಒಟ್ಟಿನಲ್ಲಿ ಕುವೆಂಪುರವರು 'ಪರಿಸರ'ವನ್ನು ಹಲವು ವಿಭಿನ್ನ ನೆಲೆಗಳಲ್ಲಿ ವಿವರಿಸಿಕೊಂಡಿರುವುದನ್ನು ಕಾಣಬಹುದಾಗಿದೆ.

ಇನ್ನು ಶಿವರಾಮಕಾರಂತರ ಚಿಂತನೆಗಳಲ್ಲಿ 'ಪರಿಸರ' ಪರಿಕಲ್ಪನೆಯು ವ್ಯಾಪಕವಾದ ರೀತಿಯಲ್ಲಿ ಬಳಕೆಯಾಗಿರುವುದನ್ನು ನೋಡಬಹುದಾಗಿದೆ. ಅಧ್ಯಯನದ ಉದ್ದೇಶಕ್ಕಾಗಿ 'ಸ್ಮೃತಿಪಟಲದಿಂದ' ಎಂಬ ಕೃತಿಯಲ್ಲಿನ ಕೆಲವು ಲೇಖನಗಳ ಮೇಲೆ ಗಮನಹರಿಸಲಾಗಿದೆ. ಇದು ಕಾರಂತರ ಜೀವನದ ಅನುಭವಗಳನ್ನು, ಆಲೋಚನೆಗಳನ್ನು ಅನಾವರಣಗೊಳಿಸುವ ಕಥಾನಕವೆಂದೇ ಹೇಳಬಹುದು. ಇವರಲ್ಲಿ ಬಳಕೆಯಾಗಿರುವ 'ನಿಸರ್ಗ' ಎಂಬ ಪದ ವಿಸ್ತೃತ ರೂಪದಲ್ಲಿ ಬಳಕೆಯಾಗಿದೆ. ಮನುಷ್ಯನ ವರ್ತನೆಗಳಲ್ಲಾಗಿರುವ ಬದಲಾವಣೆಯು ಇಡೀ ಪರಿಸರದ ಮೇಲೆ ಬೀರಿರುವ ಪರಿಣಾಮವನ್ನು ಕುರಿತು ಹೇಳುತ್ತಾ "ನಮ್ಮ ನಿತ್ಯಜೀವನದ ನೆಲೆಯಾದ ಗ್ರಾಮವನ್ನೋ, ಪ್ರದೇಶವನ್ನೋ, ಪರಿಸರವನ್ನೋ, ಬರಿದೆ ನೋಡುವುದರ ಬದಲು ಕುತೂಹಲದ ಕಣ್ಣಿಂದ ನೋಡುತ್ತ ಹೋದಂತೆ, ಅದರ ಆಕರ್ಷಕತೆ ಹೆಚ್ಚುವುದಲ್ಲದೆ ಅಲ್ಲಿನ ಕೊಳ, ನದಿ, ಕಡಲು, ಗುಡ್ಡ, ಬೆಟ್ಟ, ಕಾಡು, ಬೆಂಗಾಡು, ಬಯಲು ಇವೆಲ್ಲ ಮಾನವ ಕುಲದ ಬದುಕನ್ನು ಯಾವೆಲ್ಲ ಬಗೆಗಳಿಂದ ರೂಪಿಸಿದೆ ಎಂಬ ಅರಿವು ನಮ್ಮ ಬೆರಗನ್ನು ಹೆಚ್ಚಿಸುತ್ತದೆ. ನಿಸರ್ಗವೆಂದರೆ ಬರಿಯ ನೆಲವಲ್ಲ; ನೀರಲ್ಲ. ಅವುಗಳನ್ನು ಆಶ್ರಯಿಸಿ ಬೆಳೆದ ಸಸ್ಯಸಂಪತ್ತು; ಆ ಸಂಪತ್ತಿನಿಂದ ಸಾಧ್ಯವಾದ ಅಸಂಖ್ಯ ಜೀವಕೋಟಿಗಳ ಬದುಕು; ಅಂಥ ಜೀವಕೋಟಿಗಳಲ್ಲಿ ಮನುಷ್ಯ ಕುಲವೂ ಒಂದು. ಸಂಖ್ಯೆಯ ದೃಷ್ಟಿಯಿಂದ ಅದು ತೀರ ಅಮುಖ್ಯವಾದ ಜೀವಜಾತಿ, ಆದರೆ ಈಚಿನ ಹತ್ತಿಪ್ಪತ್ತು ಸಾವಿರ ವರ್ಷಗಳಿಂದ ಅದೇ ಜಾತಿಯ ಅಲ್ಪಸಂಖ್ಯಾತ ವ್ಯಕ್ತಿಗಳು ತಾವಿರುವ ನೆಲ, ನೀರುಗಳು ಕೇವಲ ತಮ್ಮವೇ ಎಂಬ ಭ್ರಮೆಯಿಂದ,

ಹೆಮ್ಮೆಯಿಂದ ಪ್ರಕೃತಿಯ ಇನ್ನಿತರ ಜೀವಕೋಟಿಗಳ ಹಕ್ಕನ್ನು ಅನಾದರದಿಂದ, ಅಜ್ಞಾನದಿಂದ ಕಾಣುತ್ತ ಬಂದಿರುವ ಪರಿಣಾಮವಾಗಿ ಇಂದು ನಾವು ಯಾವುದೇ ಭೂಖಂಡಕ್ಕೆ ಹೋಗಲಿ ಅಲ್ಲಿ ಮನುಷ್ಯ ಕುಲ ಹಾವಳಿ ಎಸಗಿದ ಭಯಾನಕ ಚಿತ್ರ ನಮ್ಮ ಕಣ್ಣಿಗೆ ಕಾಣಿಸುವಂತಾಗಿದೆ. ತಾನು ಸಹ ನೆಲೆಸಿರುವ ನೆಲದ ಸಸ್ಯ ಮತ್ತು ಪ್ರಾಣಿಗಳ ಮೇಲೆ ಸಂಪೂರ್ಣವಾಗಿ ಅವಲಂಬಿಸಿರುವ ಒಂದು ಪ್ರಾಣಿ ಬಳಗಕ್ಕೆ ಸೇರಿದವನು ಎಂಬ ಭಾವನೆ ಮಾನವನಲ್ಲಿ ನಷ್ಟವಾಗಿರುವುದನ್ನು ಕಾಣುತ್ತೇವೆ"9 ಇಲ್ಲಿ ಮುಖ್ಯವಾಗಿ ಎರಡು ಅಂಶಗಳನ್ನು ಗಮನಿಸಬಹುದಾಗಿದೆ. ಮೊದಲನೆಯದಾಗಿ ಮನುಷ್ಯನ ಜೀವನವನ್ನು ಪರಿಸರದಲ್ಲಿನ ಹಲವು ಅಂಶಗಳು ರೂಪಿಸಿ, ಪೋಷಿಸಿ ಪೂರಕವಾದ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿವೆ ಎಂಬುದು. ಮನುಷ್ಯ ತನ್ನ ಸಂಕುಚಿತ ಮನೋಭಾವದಿಂದ ಹೊರಗಡೆ ಬಂದಾಗ ಮಾತ್ರ ಜೀವಸರಪಳಿಯ ವ್ಯವಸ್ಥೆಯೊಂದರ ಬಗೆಗೆ ಅವನಿಗೆ ಅರಿವು ಮೂಡುತ್ತದೆ. ತನ್ನ ಬದುಕಿನ ಹಿಂದಿರುವ ಶಕ್ತಿಯನ್ನು ಆತ ತಿಳಿಯುತ್ತಾನೆ. ಎರಡನೆಯದಾಗಿ ಮನುಷ್ಯನ ಸ್ವಾರ್ಥ, ದುರಾಸೆ, ಲಾಭಾಕಾಂಕ್ಷೆಗಳು ಅವನ ಜೀವನವನ್ನು ರೂಪಿಸಿರುವ ಅಂಶಗಳ ಮೇಲೆ ದಾಳಿ ನಡೆಸಿ ಅವನ್ನು ಇಲ್ಲವಾಗಿಸುತ್ತಿದೆ. ಯಾವ ಬುದ್ಧಿವಂತಿಕೆ, ಆಲೋಚನಾ ಶಕ್ತಿ ಮನುಷ್ಯನನ್ನು ಇತರ ಪ್ರಾಣಿಗಳಿಗಿಂತ ಭಿನ್ನವಾಗಿಸಿತ್ತೋ, ಅದೇ ಗುಣ ಎಲ್ಲದರ ಮೇಲೆ ತನ್ನ ಪ್ರಭುತ್ವವನ್ನು ಸಾಧಿಸಿ ಅಹಂಕಾರದಿಂದ ಮೆರೆಯುವಂತೆ ಮಾಡಿದೆ. ತಾನೂ ಪರಿಸರದಲ್ಲಿ ಒಂದು ಸಣ್ಣ ಅಂಶವೆನ್ನುವ ಭಾವನೆಯನ್ನು ಅವನ ಮನಸ್ಸಿನಿಂದ ಹೊಡೆದೋಡಿಸಿರುವ ಪರಿಣಾಮವಾಗಿಯೇ ತನ್ನ ಕ್ರೂರವರ್ತನೆಯನ್ನು ಮುಂದುವರಿಸುತ್ತಿದ್ದಾನೆ ಎಂಬ ಸಂಗತಿಯೊಂದು ಇಲ್ಲಿ ತಿಳಿದುಬರುತ್ತದೆ.

ಹಾಗೆಯೇ ತಮ್ಮನ್ನು ಮೂಕವಿಸ್ಮಿತರನ್ನಾಗಿ ಮಾಡಿದ ಹಲವು ಘಟನೆಗಳು ತಮ್ಮ ಮೇಲೆ ಉಂಟು ಮಾಡಿದ ಪರಿಣಾಮಗಳನ್ನು ನೆನಪಿಸಿಕೊಳ್ಳುವ ಮೂಲಕವೇ ವ್ಯವಸ್ಥೆಯೊಂದನ್ನು ವಿಡಂಬಿಸುವ ರೀತಿಯೂ ಇಲ್ಲಿ ಕಂಡುಬರುತ್ತದೆ. ಸಸ್ಯ ಸಂಪದ್ಭರಿತವಾದ ದಕ್ಷಿಣ ಕನ್ನಡ ಜಿಲ್ಲೆಯ ಭಾಗದಲ್ಲೇ, ತಮ್ಮ ಬಹುಪಾಲು ಜೀವನವನ್ನು ಕಳೆದ ಕಾರಂತರು ತಮ್ಮ ಜೀವಿತಾವಧಿಯಲ್ಲಿಯೇ ತಮ್ಮ ಪರಿಸರದಲ್ಲಾದ ಹಲವು ಬದಲಾವಣೆಗಳನ್ನು ಗುರುತಿಸಿ ತಲ್ಲಣಗೊಳ್ಳುತ್ತಾರೆ. ಅದಕ್ಕೆ ಕಾರಣನಾದ ಮನುಷ್ಯನ ವರ್ತನೆಯ ಬಗೆಗೆ ಕೋಪ, ಅಸಮಾಧಾನ, ಅನುಕಂಪಗಳು ಇವರ ಮಾತಿನಲ್ಲಿ ವ್ಯಕ್ತವಾಗುತ್ತವೆ. ತಮ್ಮಲ್ಲಿರುವ ಅಮೂಲ್ಯ ನಿಧಿಯನ್ನು ಕಳೆದುಕೊಳ್ಳುತ್ತಿರುವುದರ ಬಗೆಗೆ ಯಾವ ಅರಿವೂ ಇಲ್ಲದ ಜನರನ್ನು ಕಂಡು ಕಳವಳ ಪಡುತ್ತಾರೆ. ತಮ್ಮ ಬಾಲ್ಯದ ದಿನಗಳಿಂದಲೂ ದಟ್ಟವಾದ ವನಸಂಪತ್ತಿನ ಮಧ್ಯೆ ನಿಸರ್ಗ ರಮಣೀಯತೆಯನ್ನು ಅನುಭವಿಸಿ ಬೆಳೆದ ಕಾರಂತರಿಗೆ ಅಲ್ಲಿನ ಪ್ರಾಣಿ-ಪಕ್ಷಿಗಳು ಅಷ್ಟೇ ಚಿರಪರಿಚಿತವಾದಂತಹವುಗಳು. ಎಷ್ಟೋ ವೇಳೆ ತಮ್ಮ ಮನೆಯ ಬಳಿಯಲ್ಲೇ ಸಾಕು ಪ್ರಾಣಿಗಳನ್ನು ಕದ್ದೊಯ್ಯುತ್ತಿದ್ದ ಚಿರತೆಗಳನ್ನು ಕಂಡಿದ್ದರು. ಕಾಡಿನ ಮಧ್ಯೆ ಕಗ್ಗತ್ತಲಿನಲ್ಲಿ ಘಟ್ಟಗಳನ್ನಿಳಿದು

ಬರುವಾಗ ವಾಹನಕ್ಕೆ ಇದಿರಾಗಿ ಬಂದಿದ್ದ ಚಿರತೆ, ಕಾಡೆಮ್ಮೆ, ಬರ್ಕ, ಕೆಮ್ಮಗಳನ್ನು ಕಂಡು ರೋಮಾಂಚನಗೊಂಡಿದ್ದರು. ಪುಸ್ತಕದಲ್ಲಿ ಚಿತ್ರಗಳನ್ನು ನೋಡಿ ತಿಳಿದಿದ್ದ ಅವರಿಗೆ ಆ ಪ್ರಾಣಿಗಳನ್ನು ಮುಖಾಮುಖಿಯಾಗುವಾಗ ಎಂಥದೋ ಒಂದು ಭಾವನೆ ಮನದಲ್ಲಿ ಸುಳಿದಾಡಿತ್ತು. ಆದರೆ ಕೆಲವೇ ವರ್ಷಗಳಲ್ಲಿ ಆ ರೀತಿಯಲ್ಲಿ ಕಂಡಿದ್ದ ಪ್ರಾಣಿಗಳೆಲ್ಲವೂ ಹೇಳ ಹೆಸರಿಲ್ಲದಂತೆ ಮಾಯವಾದದ್ದನ್ನು ಕಂಡು ಬೇಸರಿಸುವ ಕಾರಂತರು ಕೋವಿ, ತುಪಾಕಿಯ ಜನರಿಂದಾಗಿ ಅವನತಿಯ ಹಾದಿ ತಲುಪಿರುವ ಪ್ರಾಣಿಗಳನ್ನು ಕುರಿತು ಆಲೋಚಿಸುವಾಗ ತಮ್ಮ ಜಿಲ್ಲೆಯಲ್ಲಿ ಮಾತ್ರವಲ್ಲ ಇಡೀ ಭಾರತದಲ್ಲೇ ನಿಸರ್ಗ ಸಂಪತ್ತು ಕಳೆದುಹೋಗುತ್ತಿರುವುದರ ಬಗೆಗೆ ಖೇದಗೊಳ್ಳುತ್ತಾರೆ.

ಇದೇ ರೀತಿಯಲ್ಲಿ ತಮ್ಮ ಚಿಕ್ಕವಯಸ್ಸಿನಲ್ಲಿ ರೋಮಾಂಚನಗೊಳಿಸಿದ್ದ, ಅನೇಕ ತರಹದ ಭಾವನೆಗಳನ್ನುಂಟು ಮಾಡಿ ಕುತೂಹಲ, ಪ್ರಶ್ನೆಗಳನ್ನು ಮೂಡಿಸಿದ್ದ ಘಟನೆಗಳ ನೆನಪುಗಳ ಮರುಕಳಿಸಿದಾಗ ಅಂತಹ ಘಟನೆಗಳಿಗೆ ಕಾರಣವಾದ ಅಂಶಗಳನ್ನೇ ನಾಶ ಮಾಡಿರುವ ಮನುಷ್ಯನ ಕ್ರೌರ್ಯದ ಬಗ್ಗೆ ಕಾರಂತರು ಕೋಪಗೊಳ್ಳುತ್ತಾರೆ. ತಮ್ಮ ಬಾಲ್ಯದ ದಿನಗಳಲ್ಲಿ ಹಳದಿ, ಕರಿಗಂದು, ಹಸುರುಗಂದು ಮೈಯ ಕಪ್ಪೆಗಳನ್ನು ಸಾವಿರಾರು ಸಂಖ್ಯೆಯಲ್ಲಿ ಒಟ್ಟಾಗಿ ಕಂಡಾಗ ಇವೆಲ್ಲ ಎಲ್ಲಿದ್ದವು, ಇಷ್ಟು ದಿನ ಏಕೆ ಅವಿತುಕೊಂಡು ಕಣ್ಮರೆಯಾಗಿದ್ದವು ಎಂಬ ಪ್ರಶ್ನೆಗಳೇ ಅವರನ್ನು ಕಾಡುತ್ತಿದ್ದವು. ಆದರೆ ಇವತ್ತಿನ ಮಕ್ಕಳಲ್ಲಿ ಆ ರೀತಿಯ ಭಾವನೆಗಳಾಗಲೀ, ಪ್ರಶ್ನೆಗಳಾಗಲೀ ಮೂಡಲು ಸಾಧ್ಯವಿಲ್ಲ ಕಾರಣ ಸರ್ಕಾರದ ಭ್ರಷ್ಟಾಚಾರ, ದಬ್ಬಾಳಿಕೆ ಅಂತಹ ಸಂದರ್ಭಗಳನ್ನೇ ಇಲ್ಲವಾಗಿಸಿದೆ. ಸಾವಿರ ಕಪ್ಪೆಗಳನ್ನು ಒಟ್ಟಾರೆ ಕಂಡವರಿಗೆ ಈಗ ಒಂದನ್ನು ಕಾಣಲು ಸಾಧ್ಯವಿಲ್ಲವೆನ್ನುತ್ತ ನಮ್ಮ ದೇಶದ ಸಂಪತ್ತಿನಲ್ಲಿ ಒಂದೂವರೆ ಕೋಟಿ ರೂಪಾಯಿಗಳು ಕಪ್ಪೆಗಳ ಕಾಲುಗಳನ್ನು ಮಾರಿ ಗಳಿಸಲಾಗುತ್ತಿದೆ. ಲಾಭವಿದೆ ಎಂದರೆ ಸಂಬಂಧಗಳನ್ನು ಪರಿಗಣಿಸದೆ ತಮ್ಮ ಅಪ್ಪ-ಅಮ್ಮಂದಿರನ್ನು ಬೇಕಾದರೂ ಮಾರುತ್ತಾರೆ. ಅಂತಹ ಸಂದರ್ಭದಲ್ಲಿ ನಾವಿದ್ದೇವೆ. ಅಷ್ಟರಮಟ್ಟಿಗೆ ಮನುಷ್ಯನ ದುರಾಸೆಗಳು ಬೆಳೆಯುತ್ತಿವೆ ಎಂದು ಟೀಕಿಸುತ್ತಾರೆ. ಜೊತೆಗೆ ಮನುಷ್ಯನ ವ್ಯಾಪಾರಿ ಮನೋಭಾವ ತಂದೊಡ್ಡುತ್ತಿರುವ ಸಮಸ್ಯೆಗಳನ್ನು ಅವರು ತಿಳಿಸುತ್ತಾರೆ. ಕಪ್ಪೆಗಳ ಕುಲವನ್ನು ನಿರ್ಮೂಲನ ಮಾಡಿದ ನಮ್ಮ ಜನರು ಹೊಲಗದ್ದೆಗಳಲ್ಲಿ ಸೊಳ್ಳೆ, ಕೀಟ ಮೊದಲಾದವುಗಳ ಹಾವಳಿ ಹೆಚ್ಚಾಗಿಸಿ ಪ್ರತಿವರ್ಷ ಒಂದೂವರೆ ಕೋಟಿಯ ಇಮ್ಮಡಿ ಹಣವನ್ನು ಕ್ರಿಮಿನಾಶಕಗಳಿಗೆ ತೆರುತ್ತಿದ್ದಾರೆ. ನಮ್ಮಷ್ಟು ಬುದ್ಧಿವಂತರನ್ನು ಇನ್ನೆಲ್ಲಾದರೂ ಕಾಣಲಾದೀತೇ ಎಂದು ವ್ಯಂಗ್ಯದಿಂದ ಇಲ್ಲಿನ ಜನಗಳ ದುರ್ಬುದ್ಧಿಯನ್ನು ಪರಿಹಾಸ್ಯ ಮಾಡುತ್ತಾರೆ.

ಮೊದಲೇ ನೋಡಿದ ಹಾಗೆ ಕಾರಂತರು ಸಸ್ಯಸಂಪದ್ಭರಿತ ದಕ್ಷಿಣ ಕನ್ನಡ ಜಿಲ್ಲೆಯವರು. ತಮ್ಮಲ್ಲಿನ ವನಸಂಪತ್ತನ್ನು ಕಂಡು ಹಿಗ್ಗಿದವರು. ಒಳಗೊಳಗೆ ಜಂಬ ಪಟ್ಟು ಕೊಂಡಿದ್ದಂತಹವರು ಆ

ವನಸಂಪತ್ತಿನ ಮೇಲೆ, ಅಲ್ಲಿನ ಪ್ರಾಣಿ-ಪಕ್ಷಿಗಳ ಮೇಲೆ ಆಕ್ರಮಣ ನಡೆಯುತ್ತಿದ್ದರೂ ಪೂರ್ತಿಯಾಗೇನೂ ನಾಶವಾಗಲಾರದು ಎಂದು ಅಳಿದುಳಿದುದನ್ನು ಕಂಡು ಸಂತೋಷ ಪಟ್ಟಿದ್ದಂತಹವರು. ಆದರೆ ಕಾರಂತರ ಈ ಒಣಜಂಭಕ್ಕೆ ಪೆಟ್ಟು ಬಿದ್ದಿದ್ದು ಅವರು ವಿದೇಶೀ ಪ್ರವಾಸ ಕೈಗೊಂಡಾಗಲೇ, ಇಂಗ್ಲೆಂಡ್ ಮತ್ತು ಪಶ್ಚಿಮ ಯುರೋಪಿನ ಜನರು ಅಲ್ಲಿನ ವನಸಂಪತ್ತನ್ನು, ನೆಲವನ್ನು ರಕ್ಷಿಸಿಕೊಂಡಿರುವ ರೀತಿ, ಅವರಲ್ಲಿರುವ ಕಾಳಜಿಯನ್ನು ಕಂಡು ಸಂತೋಷದ ಜೊತೆಗೆ ಅಸೂಯೆಯ ಭಾವನೆಯು ಅವರಲ್ಲಿ ಮೂಡಿರುತ್ತದೆ. ಹಾಗೆಯೇ ನಮ್ಮ ದೇಶದಲ್ಲಿ ಇರುವ ಅಪಾರ ವನಸಂಪತ್ತನ್ನು ನೆಲಸಮ ಮಾಡುತ್ತಿರುವವರನ್ನು ಮತ್ತೆ ಮತ್ತೆ ನೆನೆದು ವಿಷಾದ ವ್ಯಕ್ತಪಡಿಸುತ್ತಾರೆ.

ಬಹುಶಃ ಕಾರಂತರಲ್ಲಿರಬಹುದಾದ ಆಸಕ್ತಿ, ಕುತೂಹಲಗಳೇ ವಿದೇಶಿ ಪ್ರವಾಸ ಕೈಗೊಂಡ ಸಂದರ್ಭದಲ್ಲಿ ನಮ್ಮಲ್ಲಿನ ಕೊರತೆಗಳ ಬಗೆಗೆ ಗಮನಹರಿಸುವಂತೆ ಪ್ರೇರೇಪಿಸಿತ್ತೆನ್ನಬಹುದು. ಯುರೋಪಿಯನ್ನರ ಜನರ ಜೀವನ ಶೈಲಿಯನ್ನವರು ವಿವರಿಸುತ್ತಾ ಅದನ್ನು ಬಹುವಾಗಿ ಮೆಚ್ಚಿಕೊಳ್ಳುತ್ತಾರೆ. ಅವರ ಅಭಿರುಚಿ, ಆಸಕ್ತಿ, ಕುತೂಹಲಗಳು ನಮ್ಮ ಜನಗಳಲ್ಲಿ ಏಕಿಲ್ಲ ಎಂದು ಪ್ರಶ್ನಿಸಿಕೊಳ್ಳುತ್ತಾರೆ. ಯುರೋಪಿಯನ್ನರದು ಯಾಂತ್ರಿಕ ಜೀವನ ಎಂದು ಆರೋಪಿಸುವ ನಾವುಗಳು ಅವರ ಕುತೂಹಲ, ಆಸಕ್ತಿ, ಸಾಹಸಮನೋಭಾವಗಳನ್ನು ಒಪ್ಪಿಕೊಳ್ಳಲೇಬೇಕು. ಜೀವನೋಪಾಯಕ್ಕಾಗಿ ಎಷ್ಟೇ ದುಡಿದರೂ ಅವರು ರಜಾದಿನಗಳನ್ನು ಕಳೆಯುವುದು ಪ್ರಕೃತಿಯ ಮಡಿಲಲ್ಲೇ. ಕಾಡು-ಮೇಡುಗಳನ್ನಲೆದು, ನದಿ ತೀರಗಳಲ್ಲಿ ವಿರಮಿಸಿ, ಪ್ರಕೃತಿಯ ಚೆಲುವನ್ನು ಆಸ್ವಾದಿಸುವ ಅವರು ತಮ್ಮ ಎಲ್ಲ ಬವಣೆಗಳಿಂದ ಹೊರಬರುವ ರೀತಿಯದು. ದಿನನಿತ್ಯದ ಜಂಜಾಟ, ಸಮಸ್ಯೆಗಳಿಂದ ದೂರಾಗಿ ನೆಮ್ಮದಿ ಕಾಣಲು ಪ್ರಕೃತಿಯ ಮಡಿಲಿಗೆ ನಡೆಯುತ್ತಾರೆ. ಅಲ್ಲಿನ ಪ್ರಾಣಿ-ಪಕ್ಷಿಗಳನ್ನು ಅವುಗಳ ನೈಸರ್ಗಿಕ ನೆಲೆಯಲ್ಲೇ ಗುರುತಿಸಿ ಕುತೂಹಲಗೊಂಡು ಅವುಗಳ ಬಗೆಗೆ ಹಲವು ಅಧ್ಯಯನಗಳನ್ನು ನಡೆಸುತ್ತಾ ಶಿಕ್ಷಣವನ್ನು ಪಡೆಯುತ್ತಾರೆ. ಆದರೆ ನಮ್ಮ ಭಾರತೀಯರಲ್ಲಿ ಈ ರೀತಿಯ ಅಭಿರುಚಿಗಳಾಗಲೀ, ಆಸಕ್ತಿಯಾಗಲೀ ಕಂಡುಬರುವುದು ತೀರ ವಿರಳ. ನೂರಕ್ಕೊಬ್ಬರಲ್ಲಿ ಕಾಣಲು ಸಾಧ್ಯ. ಪ್ರಕೃತಿಯ ರಮ್ಯ ತಾಣಗಳು ಹತ್ತಿರದಲ್ಲಿದ್ದರೂ ಅಲ್ಲಿಗೆ ಹೋಗಿ ಆಸ್ವಾದಿಸಿ ಆನಂದಿಸುವ ಮನಸ್ಸು ನಮ್ಮಲ್ಲಿ ಕಂಡುಬರುವುದಿಲ್ಲ. ಬದಲಿಗೆ ಅದರ ಬಗೆಗೆ ನಿರಾಸಕ್ತಿ, ಅನಾದರಗಳೇ ಹೆಚ್ಚು ಎನ್ನುವ ಕಾರಂತರ ಮಾತಿನಲ್ಲಿ ಅವರು ಭಾರತೀಯರನ್ನು ಸಂಪೂರ್ಣವಾಗಿ ಟೀಕಿಸುತ್ತಿದ್ದಾರೆ ಎನ್ನುವುದಕ್ಕಿಂತ ತಮ್ಮ ಅನುಭವಕ್ಕೆ ಬಂದ ಕೆಲವು ಕೊರತೆಗಳ ಕಡೆ ಬೆರಳುಮಾಡಿ ತೋರಿಸುತ್ತಿದ್ದಾರೆನ್ನಬಹುದು.

ಕಾರಂತರು ನಿಸರ್ಗದ ಮೇಲಿನ ಮನುಷ್ಯನ ದಾಳಿಯನ್ನು ಕುರಿತು ಹೇಳುವ ಹಾಗೆಯೇ ಮನುಷ್ಯ ಮತ್ತು ನಿಸರ್ಗದ ನಡುವಿನ ಗಾಢವಾದ ಸಂಬಂಧವನ್ನು ಅವರು ಮನುಷ್ಯ, ನಿಸರ್ಗದ ಪ್ರತಿಯೊಂದು ಅಂಶದಲ್ಲೂ ಪಡೆಯುವ ಅನುಭವಗಳ ಮೂಲಕ ವಿವರಿಸುತ್ತಾರೆ. ಮನುಷ್ಯ ದೇಹವನ್ನು

ಪಡೆದು ಬದುಕುತ್ತಿರುವ ನಮ್ಮ ಮೇಲೆ ನಮ್ಮ ಸುತ್ತ ಮುತ್ತಲಿನ ಜೀವಕೋಟಿಗಳೊಡನೆ ನಮಗೆ ತಿಳಿದೋ, ತಿಳಿಯದೆಯೋ ಸದಾ ವ್ಯವಹರಿಸುತ್ತಲೇ ಇರುತ್ತೇವೆ ಎಂದು ಹೇಳುತ್ತಾ ಇಡೀ ಜೀವಕೋಟಿಗೆ ಈ ಭೂಮಿ ಒಂದು ರಂಗಸ್ಥಳವಾಗಿರುವುದನ್ನವರು ಗುರುತಿಸುತ್ತಾರೆ. ಈ ಭೂಮಿಯು ಯಾವ ಯಾವ ವಸ್ತುಗಳನ್ನು ತನ್ನಲ್ಲಿರಿಸಿಕೊಂಡಿದೆ. ಅವುಗಳೆಲ್ಲವೂ ಸಹ ಮನುಷ್ಯನ ಮೇಲೆ ಪ್ರಭಾವ ಬೀರಿ ಅವನ.ಲ್ಲಿ ಯಾವ ತೆರನಾದ ಸಂವೇದನೆಗಳನ್ನುಂಟು ಮಾಡುತ್ತಿದೆ ಎಂಬುದನ್ನು ತಿಳಿದರೆ ಅದೇ ಒಂದು ಅದ್ಭುತ ಕಥಾನಕವಾಗುತ್ತದೆ. ಏಕೆಂದರೆ ಈ ರೀತಿಯ ಸಂವೇದನೆಗಳೆಲ್ಲವೂ ಪ್ರತಿಯೊಂದು ಪ್ರಾಣಿಗಳಲ್ಲೂ ಮೂಡಿಸುವ ಬೇರೆ ಬೇರೆ ತೆರನಾದ ಅನುಭವಗಳನ್ನು ಕುರಿತು ಅರ್ಥ ಮಾಡಿಕೊಳ್ಳುವುದು ಸುಲಭವಲ್ಲ. ಅದು ವಿಸ್ತಾರವೂ, ಸೂಕ್ಷ್ಮವೂ, ಗಹನವೂ ಆದುದಾಗಿದೆ ಎಂದು ಹೇಳುತ್ತಲೇ "ನನ್ನ ಸುತ್ತಣ ನಿಸರ್ಗದಿಂದ ನನಗೆ ದೊರಕಿದ ಪ್ರಚೋದನೆಗಳೇನು? ಸಂವೇದನೆಗಳು ಎಷ್ಟೆಷ್ಟು ಎಂಬುದನ್ನು ನೆನೆದರೆ ನನ್ನ ಸ್ಮರಣಶಕ್ತಿ ತೀರ ದುರ್ಬಲವಾಗಿ ನನಗೆ ಕಾಣಿಸುತ್ತದೆ"[10] ಎಂದು ಅದನ್ನು ಗುರುತಿಸಲು ವಿಫಲರಾಗುತ್ತಾರೆ.

ಎಳೆತನ ಮತ್ತು ಬಾಲ್ಯಗಳಲ್ಲಿ ಮಗು ಪರಿಸರದಿಂದ ಸ್ಪರ್ಶಜ್ಞಾನದ ಮೂಲಕ ಅನುಭವಗಳನ್ನು ಪಡೆಯುತ್ತಲೇ ಇರುತ್ತದೆ. ವಾಸಿಸುತ್ತಿರುವ ನೆಲ, ಜಲ, ಕಲ್ಲು, ಮಣ್ಣು, ಕೆಸರು, ಗಿಡ, ಮರ ಇವೆಲ್ಲವೂ ಸ್ಪರ್ಶಕ್ಕೆ, ತುಳಿತಕ್ಕೆ, ಹಿಡಿತಕ್ಕೆ ಒದಗುವ ವಿವಿಧ ಪರಿಕರಗಳಾಗುತ್ತವೆ. ಮಗುವಿನ ಮನಸ್ಸು ಅಧಿಕ ಸಂವೇದನೆಗಳೊಳಗಾಗುವುದು ಸ್ಪರ್ಶಜ್ಞಾನದಿಂದ. ಆ ಮಗು ಒಂದೊಂದು ವಸ್ತುವಿನಲ್ಲೂ ಪಡೆಯುವ ಸ್ಪರ್ಶವೂ ಒಂದೊಂದು ರೀತಿಯ ಅನುಭವಗಳನ್ನುಂಟು ಮಾಡುತ್ತಿರುತ್ತದೆ. ಅದು ಸಂತೋಷ, ದುಃಖ, ಮಾರ್ದವತೆ, ನಯಗಾರಿಕೆ, ಕಠಿಣತೆ ಹೀಗೆ ಹಲವು ಸಂವೇದನಗಳನ್ನುಂಟು ಮಾಡಿದ ಈ ಅನುಭವಗಳಾವುವು ಅದರ ನೆನಪಿನಲ್ಲಿ ಉಳಿದಿರುವುದಿಲ್ಲ. ಆದರೆ ಆ ಮಗುವಿನ ಬೆಳವಣಿಗೆಗೆ ಇವೆಲ್ಲವೂ ಸಹಕಾರಿಯಾಗಿದ್ದೇ ಇವೆ. ಆದರೆ ನಂತರ ಬೆಳೆದು ದೊಡ್ಡವನಾದಂತೆ ಮೊದಲು ದೊರಕುತ್ತಿದ್ದ ಸಂತೋಷಕರ ಅನುಭವಗಳಿಂದ ದೂರಸಾಗುತ್ತ ಕೃತಕ ವಸ್ತುಗಳಿಂದಾಗಿ ಮೊದಲು ಸಿಗುತ್ತಿದ್ದ ಸಂತೋಷವನ್ನು ಕಳೆದುಕೊಳ್ಳುತ್ತಾ ಹೋಗುತ್ತಾನೆ. ಈ ರೀತಿ ಕಳೆದುಕೊಂಡ ಸಂತೋಷದ ಬಗೆಗೆ ದುಃಖವೂ ಕಾರಂತರಲ್ಲಿ ಕಾಣುವುದನ್ನು ನೋಡಬಹುದಾಗಿದೆ. ಇಲ್ಲಿ ಕಾರಂತರು ತಮ್ಮ ಬಾಲ್ಯಜೀವನದ ಆನಂದ, ಸಂತೋಷಕ್ಕೆ ನೆಲ, ನೀರುಗಳು ದೊರಕಿಸಿದ ಸ್ಪರ್ಶೋಷ್ಣ ಸಂವೇದನೆಗಳನ್ನು ತಿಳಿಸುತ್ತಾರೆ. ಹಾಗೆಯೇ ತಾವು ಕಂಡಂತೆಯೇ ನೈಸರ್ಗಿಕ ಸ್ವರೂಪವನ್ನು ಕೆಡಿಸಿದ ಮನುಷ್ಯನ ಮಾದರಿಯನ್ನು ಹೀಗಳೆಯುತ್ತಾರೆ.

ಇಲ್ಲಿ ಕಾರಂತರಿಗೆ ನಿಸರ್ಗ ಸ್ಫೂರ್ತಿಯ ಸೆಲೆಯಾಗಿ, ಮನುಷ್ಯ ಮಾತ್ರನಲ್ಲದೇ ಇಡೀ ಜೀವಕೋಟಿಯ ಜೀವನವನ್ನು ರೂಪಿಸುವ ಶಕ್ತಿಯಾಗಿ ಕಂಡುಬರುತ್ತದೆ. ನಿಸರ್ಗ ಕಾರಂತರಲ್ಲಿ

ಉಂಟುಮಾಡುವ ಭಾವನೆಯನ್ನವರು ಹೀಗೆ ವ್ಯಕ್ತಪಡಿಸುತ್ತಾರೆ. "ಭೂಮಿಯ ಸೆರಗು ನನ್ನ ಬದುಕಿನ ಸಂಪತ್ತಿನಲ್ಲಿ ಅತಿ ದೊಡ್ಡ ವಸ್ತುವಾಗಿ ಕಂಡಿದೆ. ಆ ಸಂಪತ್ತಿನ ಹಿರಿಮೆ–ನಾವು ಅದನ್ನು ನೋಡುವ ಶೈಲಿಯನ್ನು, ಕಾಣುವ ಕಣ್ಣನ್ನು ಹೊಂದಿದೆ. ಅವುಗಳ ಇನ್ನೊಂದು ಗುಣ–ಸಾವಿರ ವರ್ಷಗಳ ಕಾಲ ಸಾವಿರಾರು ಜನರು ಅದನ್ನು ಕಂಡು ಅಸೂಯೆಪಟ್ಟರೂ, ಕಣ್ಣಿಂದ ಸೂರೆ ಮಾಡಿದರೂ, ಅದು ಬತ್ತಿದ್ದೆಂಬುದಿಲ್ಲ. ಕಡುಬಡವನೂ ಕಂಡು ಹಿಗ್ಗಬಹುದಾದ ಸಂತೋಷವದು. ಅಷ್ಟಿದ್ದೂ ನನ್ನ ಜಿಲ್ಲೆಯ ಜನರಾಗಲೀ, ಅದರ ಆಚೀಚಿನ ಜನಗಳಾಗಲಿ ಮೈ ಮತ್ತು ನಾಲಿಗೆಗಳಿಗೆ ಮಾತ್ರ ಸಿಗುವ ಸುಖಗಳನ್ನಷ್ಟೇ ಹಂಬಲಿಸಿ, ಅದು ಸಿಗದುದಕ್ಕಾಗಿ ತಮ್ಮ ಬಡತನದ ಜಪವೊಂದನ್ನೇ ಮಾಡುತ್ತಿರುವುದನ್ನು ಕಂಡಾಗಲೆಲ್ಲ ಹೊಟ್ಟೆಗಿಲ್ಲದವನು ಬಡವನಲ್ಲ; ಕಣ್ಮನಗಳ ಸಂಸ್ಕಾರವಿಲ್ಲದವನು ಬಡವ ಎಂಬ ಭಾವನೆ ಉಂಟುಮಾಡುತ್ತದೆ".[11] ಇಲ್ಲಿ ನಿಸರ್ಗದ ಹಿರಿಮೆಯನ್ನು ಅದನ್ನು ಕಂಡು ಸಂತೋಷಿಸಲು ಸಾಧ್ಯವಾಗದ ಮನುಷ್ಯನ ಸಣ್ಣತನವನ್ನು ವಿವರಿಸುತ್ತಾರೆ.

ಈ ರೀತಿ ನಿಸರ್ಗದ ಸೌಂದರ್ಯವನ್ನು ನೋಡಿ ವರ್ಣಿಸುವ ಕಾರಂತರಿಗೆ ಆ ಪ್ರಕೃತಿಯ ಉಗ್ರರೂಪತೆಯು ಭಯವನ್ನು, ತನ್ನ ಅಸ್ತಿತ್ವದ ಅಸ್ಥಿರತೆಯನ್ನು ತೋರಿಸುತ್ತದೆ. 1923ರ ಸುಮಾರಿಗೆ ಹಾಲಾಡಿಹೊಳೆ, ಸುವರ್ಣನದಿ, ಸೀತಾನದಿ, ಎಣ್ಣೆಹೊಳೆ ಮೊದಲಾದ ಹಲವಾರು ನದಿಗಳು ಒಂದು ದಿನ ಇದ್ದಕ್ಕಿದಂತೆ ನೀರಿನಿಂದ ಉಕ್ಕಿ ಮೇರೆ ಮೀರಿ ಹರಿದಾಗ ಜನರ ಜೀವನ ಅಸ್ತವ್ಯಸ್ತವಾಗಿ ಪ್ರಾಣ ಉಳಿಸಿಕೊಳ್ಳಲು ಒದ್ದಾಡುವಂತ ಸಂದರ್ಭವನ್ನು ಕಣ್ಣಾರೆ ನೋಡಿದ ಕಾರಂತರು ಆ ನೆರೆಯ ಹಾವಳಿಯೆಷ್ಟೊಂದು ಅಂಕೆ ಸಂಖ್ಯೆಗಳನ್ನು ಸಂಗ್ರಹಿಸಿದಾಗ ಅದನ್ನು ತಿಳಿಯುವ ಸಲುವಾಗಿ ಸಂಪೂರ್ಣ ನೆರೆ ಇಳಿಯುವ ಮೊದಲೇ ದೋಣಿಯವನ್ನೊಬ್ಬನನ್ನು ಪುಸಲಾಯಿಸಿ ಆ ನದಿಯ ಉದ್ದಕ್ಕೂ, ಅಗಲಕ್ಕೂ ಹಾದು ನೋಡಿಬಂದರು. ಆಗ "ನೀರಿನ ಆ ಭರಕ್ಕೆ, ಅದರ ಸುತ್ತ ಸುಳಿಯುವ, ಉಬ್ಬು ತಗ್ಗುವ ವಿರಾಟ ಉನ್ಮತ್ತ ರೂಪವನ್ನು ಕಂಡಾಗ – ನಾನೂ ಆ ನದಿಯ ಪಾಲಿಗೆ ಒಂದು ಒಣ ಎಲೆಯಲ್ಲವೇ ಅನ್ನಿಸಿತು. ಜೀವವನ್ನು ಕೈಯಲ್ಲಿ ಹಿಡಿದುಕೊಂಡು ತಿರುಗಿ ದಂಡೆಯನ್ನು ಎಂದು ಸೇರಿಯೇನು! ಎಂಬ ಭಯ ಮನದಲ್ಲಿ ಕಾಣಿಸಿದ್ದುಂಟು"[12] ಎಂದು ಪ್ರಕೃತಿಯ ಇದಿರಲ್ಲಿ ತಾನು ಎಷ್ಟು ಸಣ್ಣ ವ್ಯಕ್ತಿ ಎಂಬುದನ್ನು ಕಲ್ಪಿಸಿಕೊಳ್ಳುತ್ತಾರೆ. ಆದರೆ ಬದುಕಿನ ಪ್ರಶ್ನೆ ಬಂದಾಗ ಎದುರಾಗುವ ಎಲ್ಲಾ ಸಮಸ್ಯೆಗಳ ವಿರುದ್ಧ ಹೋರಾಡಿ ತನ್ನ ಜೀವನವನ್ನು ರೂಪಿಸಿಕೊಳ್ಳುವ ಮನುಷ್ಯನ ಅಗಾಧ ಶಕ್ತಿಯನ್ನವರು ಪ್ರಕೃತಿಯಿಂದಲೇ ಪಡೆದರೂ ಅದಕ್ಕೆ ಸರಿಸಮನಾಗಿ ನಿಲ್ಲಿಸುತ್ತಾರೆ. ಇದಕ್ಕೆ ಅವರ ಮರಳಿಮಣ್ಣಿಗೆ, ಬೆಟ್ಟದಜೀವದಂತಹ ಕಾದಂಬರಿಗಳನ್ನೇ ನೋಡಬಹುದಾಗಿದೆ.

ಕಾರಂತರು ನಮ್ಮಲ್ಲಿರುವ ಶಿಕ್ಷಣ ವ್ಯವಸ್ಥೆಯ ಕೆಲವೊಂದು ನ್ಯೂನತೆಗಳನ್ನು ಗುರುತಿಸುತ್ತಾರೆ. ಇದನ್ನು ಅಮೇರಿಕಾದ ಶಿಕ್ಷಣ ವ್ಯವಸ್ಥೆಯೊಂದಿಗಿನ ಹೋಲಿಕೆಯ ಮೂಲಕ

ಕಂಡುಕೊಂಡಂತಹದ್ದಾಗಿದೆ. ಅಮೇರಿಕ, ಯೂರೋಪಿನ ಹುಡುಗರಂತೆ ನಮ್ಮ ವಿದ್ಯಾರ್ಥಿಗಳಲ್ಲಿ ನಿಸರ್ಗ ಜೀವನ, ನಿಸರ್ಗ ಸೌಂದರ್ಯವನ್ನು ಅನ್ವೇಷಿಸುವ ಚಪಲ ಬೆಳೆದಿದ್ದರೆ ನಿಜವಾಗಿಯೂ ನಮ್ಮ ಶಾಲೆಗಳಲ್ಲಿ ನಿಸರ್ಗಪ್ರಿಯನಾದ ಒಬ್ಬ ವಿದ್ಯಾರ್ಥಿಯೂ ಒಳಕ್ಕೆ ಕುಳಿತಿರುತ್ತಿರಲಿಲ್ಲ. ಅಂತಹ ವಿದ್ಯಾರ್ಥಿಗಳು ಕಾಡು ಪಾಲಾಗುತ್ತಿದ್ದರು. ಆದರೆ ನಾವು ಎಷ್ಟು ವಿವೇಕಿಗಳೆಂದರೆ ಜೀವನದಲ್ಲಿ ಯಾವುದೇ ಕಾರ್ಯಕೈಗೊಂಡರೂ ಇದರಿಂದ ಏನೂ ಉಪಯೋಗ? ಎಷ್ಟು ಲಾಭಗಳಿಸಬಹುದು ಎಂಬುದನ್ನು ಮೊದಲು ತಿಳಿಯುತ್ತೇವೆ. ಅನಂತರದಲ್ಲಿ ಕಾರ್ಯಕೈಗೊಳ್ಳುತ್ತೇವೆ ಎಂದು ಹೇಳುವುದರ ಮೂಲಕ ಶಿಕ್ಷಣ ವ್ಯವಸ್ಥೆಯೇ ಪ್ರಕೃತಿಯಿಂದ ದೂರವುಳಿದು ವಿದ್ಯಾರ್ಥಿಗಳಲ್ಲಿ ಜ್ಞಾನ ದಾಹವನ್ನು ಮೂಡಿಸುವಲ್ಲಿ ವಿಫಲವಾಗಿದೆಯೆಂಬುದನ್ನವರು ಗುರುತಿಸುತ್ತಾರೆ.

ನಿಸರ್ಗವು ದೊರಕಿಸಿಕೊಟ್ಟಿರುವ ಅನುಭವದ ನೆಲೆಯಲ್ಲಿ ಅವರು ಕಂಡುಕೊಂಡ ಸತ್ಯ ಇದಾಗಿದೆ. "ನದಿಯೆಂಬುದು ಜಡವಲ್ಲ; ಕಾಡು ಜಡವಲ್ಲ; ಬೆಟ್ಟವೂ, ಬಂಡೆಗಳು ಜಡವಲ್ಲ; ಅವು ಚಲಿಸಲಿ, ಚಲಿಸದಿರಲಿ, ಅವುಗಳೊಳಕ್ಕೆ ನನ್ನ ಮೇಲೆ ಪರಿಣಾಮ ಬೀರಬಲ್ಲ ಯಾವುದೋ ಅದ್ಭುತ ಶಕ್ತಿಯಿದೆ. ಅವು ಜೀವಂತ ವಸ್ತುಗಳು ಎಂಬ ಭಾವನೆ ನನ್ನ ಮನಸ್ಸಿನಲ್ಲಿ ಹುಟ್ಟತೊಡಗಿತು. ಅಲ್ಲಿಂದ ಇಲ್ಲಿಯ ತನಕ ನನ್ನ ಜಿಲ್ಲೆಯಲ್ಲಿ ದೇಶದಲ್ಲಿ, ವಿದೇಶಗಳಲ್ಲಿ ಕಂಡ ವಿವಿಧ ನೈಸರ್ಗಿಕ ದೃಶ್ಯಗಳು ನನ್ನಲ್ಲಿ 'ನಿಸರ್ಗ ಜಡವಲ್ಲ; ಚೈತನ್ಯಮಯ' ಎಂಬ ಸಂವೇದನೆಯನ್ನು ಉಂಟು ಮಾಡಿವೆ. ಅಂಥ ಒಂದೊಂದು ದೃಶ್ಯವೂ ಉಂಟು ಮಾಡುವ ಸಂವೇದನೆಗಳ ಸ್ವರೂಪ ವಿಭಿನ್ನ; ಆ ಪ್ರತಿಯೊಂದು ನಿಸರ್ಗ ದೃಶ್ಯಕ್ಕೂ ಸ್ವಂತ ವ್ಯಕ್ತಿತ್ವವಿದ್ದಂತೆ ಬೋಧೆಯಾಗುತ್ತದೆ. ಗಾಢವಾಗಿ ಯೋಚಿಸಿದರೆ ಇದು ನನ್ನ ಮನಸ್ಸನ್ನು ಹೊಂದಿದೆ ಅನಿಸಬಹುದಾದರೂ 'ನಾನೆಂಬ ವ್ಯಕ್ತಿ ಪ್ರಕೃತಿ ಪಡೆದೊಂದು ಕೂಸಲ್ಲವೇ?'"[13] ಹೀಗೆ ಕಾರಂತರು ತನ್ನ ಇಡೀ ಜೀವನದ ಮೂಲದ್ರವ್ಯವಾಗಿ ಪ್ರಕೃತಿಯನ್ನು ಕಂಡಿರುವುದನ್ನು ನೋಡಬಹುದಾಗಿದೆ.

ಕುವೆಂಪು ಮತ್ತು ಕಾರಂತರಿಬ್ಬರ ಸಾಹಿತ್ಯದಲ್ಲಿ 'ಪರಿಸರ'ದ ಚಿತ್ರಣ ಸಹಜವಾಗಿ ಮೂಡಿಬಂದಿದೆ. ಅವರ ಒಟ್ಟಾರೆ ಸಾಹಿತ್ಯವನ್ನು ಗಮನಿಸಿದಾಗ ಈ ಪರಿಕಲ್ಪನೆಯು ಇನ್ನು ವಿಸ್ತೃತರೂಪವನ್ನು ಪಡೆಯುವ ಸಾಧ್ಯತೆಗಳು ಹೆಚ್ಚಾಗಿಯೂ ಇವೆ. ಆದರೆ ನಿಬಂಧದ ಸೀಮಿತತೆಯ ಕಾರಣದಿಂದಾಗಿ ಕೆಲವೊಂದನ್ನು ಮಾತ್ರ ವಿವರಿಸಿಕೊಳ್ಳಲು ಪ್ರಯತ್ನಿಸಲಾಗಿದೆ. ಕುವೆಂಪುರವರ ಕಾದಂಬರಿಯಲ್ಲಿ ಅಲ್ಲಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರಕ್ಕೆ ಹೆಚ್ಚು ಒತ್ತು ನೀಡಲಾಗಿದೆ. ಅಲ್ಲಿನ ಪರಿಸರದಲ್ಲಾಗುವ ಅನೇಕ ಪಲ್ಲಟ, ಸ್ಥಿತ್ಯಂತರಗಳನ್ನು ಗುರುತಿಸುತ್ತಾ ಪ್ರಕೃತಿಯ ಜೊತೆಗಿನ ಅಲ್ಲಿನ ಜನರ ಬದುಕು ಅನ್ಯೂನ್ಯವಾಗಿರುವುದನ್ನು ನೋಡಬಹುದಾಗಿದೆ. ಹಾಗೆಯೇ ಕಾರಂತರ ಲೇಖನಗಳಲ್ಲಿ ನೈಸರ್ಗಿಕ ಪರಿಸರವನ್ನು ಹಾಳುಗೆಡಹುತ್ತಿರುವ ಮನುಷ್ಯನ ಕೆಟ್ಟ ವರ್ತನೆಗಳ ವಿಡಂಬನೆಯನ್ನು

ಹಾಗೆಯೇ ಪರಿಸರದಲ್ಲಿನ ಪ್ರತಿಯೊಂದು ವಸ್ತುವು, ಜೀವಿಯೂ ಒಂದನ್ನೊಂದು ಪ್ರಭಾವಿಸುವ ರೀತಿಯನ್ನು, ಸರಪಳಿಯ ಹಾಗೆ ಒಂದಕ್ಕೊಂದು ಹೆಣೆದುಕೊಂಡಿರುವುದರಿಂದಲೇ ಮನುಷ್ಯನು ತನ್ನ ಅಸ್ತಿತ್ವವನ್ನು ಕಂಡುಕೊಳ್ಳಲು ಸಾಧ್ಯವಾಗಿದೆ ಎಂಬುದನ್ನು ಹಲವು ನೆಲೆಗಳ ಮೂಲಕ ತಿಳಿಸಿದ್ದಾರೆ.

## ಅಡಿ ಟಿಪ್ಪಣಿಗಳು

1. ಕುವೆಂಪು ಸಾಹಿತ್ಯಲೋಕ–2, ಸಂ.ಹ.ರ.ರಾಜೇಗೌಡ; ಕುವೆಂಪು ಅಧ್ಯಯನ ಕೇಂದ್ರ, ಪುಟಸಂಖ್ಯೆ–55
2. ಮಲೆಗಳಲ್ಲಿ ಮದುಮಗಳು, ಕುವೆಂಪು, ಉದಯರವಿ, ಪುಟ ಸಂಖ್ಯೆ –3
3. ಕುವೆಂಪು ಕಥನ, ಡಾ.ಉದ್ದಂಡಯ್ಯ, ಅಧ್ಯಯನ ಮಂಡಲ, ಪುಟ ಸಂಖ್ಯೆ – 31
4. ಕುವೆಂಪು ಸಾಹಿತ್ಯ ಲೋಕ – 3, ಸಂ.ಹ.ರ.ರಾಜೇಗೌಡ, ಕುವೆಂಪು ಅಧ್ಯಯನ ಕೇಂದ್ರ ಪುಟಸಂಖ್ಯೆ – 73
5. ಅದೇ, ಪುಟ – 74
6. ಕನ್ನಡದ ಹಾಡುಪಾಡು, ಕೆ.ಸಿಶಿವಾರೆಡ್ಡಿ, ಅಧ್ಯಯನ ಮಂಡಲ, ಪುಟ ಸಂಖ್ಯೆ – 132
7. ಆಯ್ದ ಕುವೆಂಪು ಕವಿತೆಗಳು, ಸಂ.ಸಿ.ಪಿ.ಕೆ, ಚೇತನಾ ಬುಕ್ ಹೌಸ್, ಪುಟ ಸಂಖ್ಯೆ – 2
8. ಅದೇ, ಪುಟ – 29
9. ಸ್ಮೃತಿ ಪಟಲದಿಂದ, ಶಿವರಾಮಕಾರಂತ, ರಾಜಲಕ್ಷ್ಮೀ ಪ್ರಕಾಶನ, ಪುಟ ಸಂಖ್ಯೆ – 119
10. ಅದೇ, ಪುಟ – 2
11. ಅದೇ, ಪುಟ – 52
12. ಅದೇ, ಪುಟ – 49
13. ಅದೇ, ಪುಟ – 38

## ಅಧ್ಯಾಯ – 3

## ತೇಜಸ್ವಿಯವರ 'ಪರಿಸರದ ಕತೆ'ಗಳಲ್ಲಿ ಪರಿಸರದ ಸ್ವರೂಪ

ತೇಜಸ್ವಿಯವರಲ್ಲಿ 'ಪರಿಸರ' ಪರಿಕಲ್ಪನೆಯ ವಿಸ್ತೃತ ರೂಪವನ್ನು ನೋಡಬಹುದು. ಅಲ್ಲಿ ಪ್ರಾಣಿ–ಪಕ್ಷಿ–ಮನುಷ್ಯ–ಗಿಡಮರ ಹೀಗೆ ಎಲ್ಲವೂ ಸೇರಿ ಪರಸ್ಪರ ಸಂಬಂಧಿಯಾದ ಜೀವಜಾಲವೊಂದು ನಿರ್ಮಾಣವಾಗಿರುತ್ತದೆ. ಇವುಗಳೆಲ್ಲದರ ಬಗ್ಗೆಯೂ ತೇಜಸ್ವಿಯವರಲ್ಲಿ ಒಂದು ತೆರನಾದ ಕುತೂಹಲ, ಆಸಕ್ತಿ, ಕಾಳಜಿ, ಅವುಗಳ ಅಸ್ತಿತ್ವವನ್ನು ತಿಳಿಯಬೇಕೆಂಬ ಹಂಬಲ ಕಾಣುತ್ತದೆ. ಈ ಹಂಬಲವೇ ಅವರನ್ನು ಹುಡುಕಾಟಕ್ಕೆ ಕರೆದೊಯ್ಯುವಂತಹದ್ದು. ತೇಜಸ್ವಿಯವರಲ್ಲಿರುವ ವೈಜ್ಞಾನಿಕ ದೃಷ್ಟಿಕೋನ ಅವರು ತಿಳಿಸ ಹೊರಟಿರುವ ವಿಷಯ, ವಸ್ತುವಿನ ಬಗೆಗೆ ಸಂಪೂರ್ಣ ಮಾಹಿತಿ ಒದಗಿಸಿದರೆ, ಲೇಖಕ ಪ್ರಜ್ಞೆ ಪ್ರತಿಯೊಂದು ಘಟನೆಯ ಜೀವಂತಿಕೆಯನ್ನು ಕಾಯ್ದುಕೊಂಡು ಅಭಿವ್ಯಕ್ತಿಸಲು ನೆರವಾಗುತ್ತದೆ.

ಪರಿಸರದಲ್ಲಿನ ಪ್ರಾಣಿ–ಪಕ್ಷಿ–ವನಸಂಪತ್ತುಗಳ ಬಗ್ಗೆ ತೇಜಸ್ವಿಯವರ ನಿಲುವು, ಧೋರಣೆ ಅವುಗಳ ನಿರಂತರ ಸಂಪರ್ಕದಿಂದಾಗಿ ಪಲ್ಲಟಗೊಳ್ಳುತ್ತ ಕುತೂಹಲ, ಆಸಕ್ತಿಗಳು ಕಾಳಜಿಯಾಗಿ ಪರಿವರ್ತನೆಗೊಂಡು ಒಬ್ಬ ಪರಿಸರವಾದಿಯನ್ನಾಗಿ ರೂಪಿಸುವ ಅನೇಕ ಸಂದರ್ಭಗಳ ಎಳೆಗಳನ್ನು ಅವರ ಕೃತಿಗಳಲ್ಲಿ ಗಮನಿಸಬಹುದು. ನಗರ ಜೀವನದಿಂದ ದೂರಾಗಿ ಕಾಡುಕೊಂಡು, ತೋಟ ಮಾಡಲು ಆರಂಭಿಸಿದ ಮೊದಲ ವರ್ಷಗಳಲ್ಲಿನ ಅವರ ಅನುಭವಗಳನ್ನು ತಿಳಿಸುತ್ತಾ, "ಕಿವಿ ಮತ್ತು ನಾನು ಸೇರಿ ಅನೇಕ ಪ್ರಾಣಿಗಳನ್ನು ಶಿಕಾರಿ ಮಾಡಿ ಸ್ವಾಹಾ ಮಾಡಿದ್ದೇವಾದರೂ ಆಗಿದ್ದ ಪ್ರಾಣಿಗಳ ಸಂಖ್ಯೆ ದೃಷ್ಟಿಯಿಂದ ನನಗೆ ಶಿಕಾರಿ ಮಾಡಿದೆವಲ್ಲ ಎಂದು ಅಷ್ಟೊಂದೇನೂ ಬೇಸರವಾಗುತ್ತಿರಲಿಲ್ಲ, ಇದಕ್ಕೆ ಭಾರತದ ನಶಿಸುತ್ತಿರುವ ವನಸಂಪತ್ತಿನ ಬಗ್ಗೆ ಆಗ ನನಗಿದ್ದ ಅಜ್ಞಾನವು ಒಂದು ಕಾರಣವಿರಬಹುದು"[1] ಎಂದು ಬರೆಯುವ ತೇಜಸ್ವಿಯವರ ಇಂತಹ ಶಿಕಾರಿಗಳು ಮತ್ತು ಕಾಡುಸುತ್ತುವ ಅಭ್ಯಾಸವೇ ಅವರ ದಟ್ಟ ಅನುಭವಕ್ಕೆ ಕಾರಣವಾಗಿದೆ ಎನ್ನಬಹುದು. ಎಷ್ಟೋ ಪ್ರಾಣಿಗಳನ್ನು ಕಿವಿ, ಸ್ನೇಹಿತ ಶ್ರೀರಾಮ್‌ರ ಜೊತೆಗೂಡಿ ಶಿಕಾರಿ ಮಾಡಿದ ತೇಜಸ್ವಿಯವರು ತದನಂತರದಲ್ಲಿ ಒಂದು ಕಾಡುಕೋಳಿಯನ್ನು ರಕ್ಷಿಸಲು ಹೆಣಗಾಡುವುದನ್ನು ನೋಡಬಹುದು. ತೇಜಸ್ವಿಯವರ ತಂದೆ ಅವರ ತೋಟದಲ್ಲಿದ್ದ ಕಾಡುಕೋಳಿಯನ್ನು ನೋಡಿ ಏನಾದರೂ ಮಾಡಿ ಇವುಗಳನ್ನು ಉಳಿಸಲು ಪ್ರಯತ್ನಿಸು ಎಂದು ಹೇಳಿದ ಮಾತನ್ನು ಗಂಭೀರವಾಗಿ ತೆಗೆದುಕೊಂಡ ತೇಜಸ್ವಿಯವರ ಕಾಳಜಿ ಇಲ್ಲಿ ನಮಗೆ ಮುಖ್ಯವೆನಿಸುತ್ತದೆ. ಆ ಸಂದರ್ಭದಲ್ಲಿ ಅವರಾಡುವ ಮಾತು, ನಡೆದುಕೊಳ್ಳುವ ರೀತಿ ಆಶ್ಚರ್ಯ ಮೂಡಿಸುತ್ತದೆ. "ಒಂದಾನೊಂದು ಕಾಲದಲ್ಲಿ ನಾನು ಹೀಗೆಯೇ ಇದ್ದಿದ್ದರಿಂದ ಅವರ ಮನಃ

ಸ್ಥಿತಿಯನ್ನು ನಾನು ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲೆ. ನಮ್ಮ ತೋಟದಲ್ಲಿ ಶಿಕಾರಿ ಮಾಡಬೇಡಿ ಎಂದು ಅವರಿಗೆ ಜೋರು ಮಾಡಿದರೆ ಅವರು ನಾನು ಮಾತ್ರ ಶಿಕಾರಿ ಮಾಡಬೇಕೆಂಬ ಸ್ವಾರ್ಥದಿಂದ ಹಾಗೆ ಹೇಳುತ್ತಿದ್ದೇನೆಂದು ತಿಳಿಯುತ್ತಿದ್ದರೇ ಹೊರತು ಅವುಗಳನ್ನು ಸಂರಕ್ಷಿಸಲು ಗಂಭೀರ ಪ್ರಯತ್ನ ಮಾಡುತ್ತಿದ್ದೇನೆಂದು ಊಹಿಸಲೂ ಸಾಧ್ಯವಾಗಲಿಲ್ಲ"[2] ಎಂದು ನೊಂದುಕೊಳ್ಳುತ್ತ ಅವುಗಳ ಸಂರಕ್ಷಣೆಗಾಗಿ ಹಲವು ಪ್ರಯತ್ನಗಳನ್ನು ಮಾಡುತ್ತಾರೆ. ತೋಟದಲ್ಲಿ ಗಸ್ತು ತಿರುಗುವುದು, ಕೋವಿ ಈಡಿನ ಶಬ್ದ ಆದ ಕೂಡಲೇ ಅಲ್ಲಿಗೆ ಹೋಗಿ ನೋಡುವುದು, ಅಂತಹ ಶಿಕಾರಿಗಾರರ ಪಿತೂರಿಗಳು ಹೆಚ್ಚಾದಂತೆ ದಿನಾಬೆಳಗ್ಗೆ ಎದ್ದು ತಂತಿಬೇಲಿ ಉಸ್ತುವಾರಿ ನೋಡುತ್ತಾ ಪಾತಕಿಗಳು ಕಟ್ಟಿದ್ದ ಉರುಳುಗಳನ್ನೆಲ್ಲ ಬಿಚ್ಚಿ ಕಾಡಿಗೆ ಎಸೆಯುವುದು ಇಂತಹ ಸಂದರ್ಭದಲ್ಲೇ ಕಬ್ಬೆಕ್ಕು, ಮೊಲ, ಮುಂಗುಸಿ ಬಲಿಯಾದುದ್ದನ್ನು ನೋಡಿ ಅವರುಗಳ ಮೇಲೆ ಕೋಪಗೊಂಡು ಶಪಿಸುವುದನ್ನು ನೋಡಬಹುದು.

ಮತ್ತೊಂದು ಸಂದರ್ಭದಲ್ಲಿ ಅವರ ಮನೆಯ ಹತ್ತಿರ ಬಿಡಾರ ಹೂಡಿದ್ದ ಜನರ ದುರಾಸೆಗಣ್ಣಿಗೆ ಬಲಿಯಾದ ಪ್ರಾಣಿಗಳನ್ನು ನೋಡಿ ಅವರ ಕೋಪ, ಅಸಮಾಧಾನಗಳು ಅರಣ್ಯ ಇಲಾಖೆಯವರಿಗೆ ದೂರು ನೀಡಿ ಅವರನ್ನು ಆ ಸ್ಥಳದಿಂದ ಖಾಲಿ ಮಾಡಿಸುವವರೆಗೂ ಮುಂದುವರೆಯುತ್ತದೆ. ಅದೇ ಸಂದರ್ಭದಲ್ಲಿ "ನಮ್ಮ ತೋಟದಲ್ಲಿರುವ ಮೂರ್ನಾಲ್ಕು ಕೋಳಿಗಳನ್ನು ಉಳಿಸಲು ಇಷ್ಟೊಂದು ಜನರನ್ನು ಮೈಮೇಲೆ ಹಾಕಿಕೊಂಡು ದಿನಂಪ್ರತಿ ಹಗರಣ ಮಾಡಬೇಕಾಯ್ತಲ್ಲಾ ಎಂದು ಎಲ್ಲದರ ಮೇಲೂ ಬೇಸರ ಬಂತು. ನಮ್ಮ ಬೇಲಿಯೊಳಗೆ ಬದುಕುತ್ತಿದ್ದ ನಾಲ್ಕಾರು ಕೋಳಿಗಳಿಗೆ ರಕ್ಷಣೆ ಕೊಡಲು ಸಾಧ್ಯವಾಗದಿದ್ದ ನಾನು ಸಹ್ಯಾದ್ರಿ ಕಾಡುಗಳ, ಹಿಮಾಲಯದ ಕಾಡುಗಳ ಯೋಗಕ್ಷೇಮ ನೋಡುವವನಂತೆ ಮಾತಾಡುವುದು ನಿಸ್ಸಹಾಯಕ ಕ್ಷುದ್ರ ಜೀವಿಯೊಬ್ಬನ ಬೂಟಾಟಿಕೆಯಂತೆ ಕಂಡಿತು"[3] ಎಂಬ ಮಾತು ಹಾಗೆಯೇ "ಈಗ ಕಾಡುಗಳಿಲ್ಲದ, ಕಾಡು ಪ್ರಾಣಿಗಳಿಲ್ಲದ ಪರಿಸರವು ಶ್ಮಶಾನಕ್ಕಿಂತ ಭೀಕರವಾಗಿ ಕಾಣುತ್ತದೆ"[4] ಎಂಬುದು ವ್ಯವಸ್ಥೆಗೆ ಹಿಡಿದ ಕನ್ನಡಿಯಂತಿದೆ. ರಕ್ಷಣೆಯಿಲ್ಲದೆ ಬರಿದಾಗುತ್ತಿರುವ ವನಸಂಪತ್ತು, ಅಳಿವಿನಂಚಿಗೆ ಬಂದಿರುವ ವನ್ಯಜೀವಿಗಳು. ಇವುಗಳ ನಾಶಕ್ಕೆ ಕಾರಣವಾಗಿರುವ ಮನುಷ್ಯನ ಆಸೆಬುರುಕತನ, ಇವುಗಳೆಲ್ಲದರ ಮಧ್ಯೆ ಮೂಡಿಗೆರೆಯ ಯಾವುದೋ ಒಂದು ಮೂಲೆಯಲ್ಲಿ ಕುಳಿತು ಕೆಲವೊಂದು ಪ್ರಾಣಿಗಳನ್ನು ರಕ್ಷಿಸಿ ಕಾಪಾಡುತ್ತೇನೆಂದು ಹೊರಟ ತನ್ನ ಮೂರ್ಖತನ, ಇವೆಲ್ಲದರ ಚಿತ್ರಣ ಕಣ್ಣಮುಂದೆ ಬಂದಾಗ ಏನು ಮಾಡಲೂ ಸಾಧ್ಯವಾಗದ ತನ್ನ ನಿಸ್ಸಹಾಯಕ ಸ್ಥಿತಿಯ ಬಗೆಗೆ ತೇಜಸ್ವಿ ಬೇಸರ ವ್ಯಕ್ತಪಡಿಸುತ್ತಾರೆ. ಇಂತಹ ಯೋಚನೆಗಳೇ ತೇಜಸ್ವಿಯವರನ್ನು ಭವಿಷ್ಯತ್ತಿನ ಭೀಕರ, ದುರಂತ ಸಂದರ್ಭದೊಂದಿಗೆ ಕಾಲ್ಪನಿಕವಾಗಿ ಮುಖಾಮುಖಿಯಾಗಿಸುವುದನ್ನು ನೋಡಬಹುದು. "ಕಾಡುಗಳನ್ನು ನಾಶ ಮಾಡಿದಾಗ ಅಲ್ಲಿರುವ ಪ್ರಾಣಿಗಳನ್ನು, ಅವುಗಳ ಪರಿಸರವನ್ನು ಧ್ವಂಸ ಮಾಡಿದಾಗ ರಹಸ್ಯ, ಗೌಪ್ಯ, ಅದ್ಭುತಗಳ

ನಿರಂತರ ನಿಧಿಯೊಂದನ್ನು ನಮ್ಮ ಕಿರಿಯ ಜನಾಂಗ ಕಳೆದುಕೊಂಡಂತಾಗಿ ಮನಸ್ಸು ಖಿನ್ನವಾಗುತ್ತದೆ. ಈ ದುರಂತದ ದುಃಖವನ್ನು ಅಂಕಿ ಸಂಖ್ಯೆಗಳ ಆಧಾರದ ಮೇಲೆ, ಸಿದ್ಧಾಂತಗಳ ಮೂಲಕ ವಿಶ್ಲೇಷಿಸಿ, ಪರಿಸರ ಸಂರಕ್ಷಣೆಯ ಬಗ್ಗೆ ಜನಗಳಿಗೆ ಹೇಳಲು ಮನಸ್ಸೇ ಬರುವುದಿಲ್ಲ. ಏಕೆಂದರೆ, ನಾನು ಕಂಡಂತೆ ಕಾಡನ್ನು ಕಂಡಿಲ್ಲದ, ಅನುಭವಿಸಿಲ್ಲದ ಮನಸ್ಸುಗಳಿಗೆ ನನ್ನ ಮನಸ್ಸಿನ ದುಗುಡವನ್ನು ನಿರ್ಜೀವ ಅಂಕಿಸಂಖ್ಯೆಗಳ ವಿಶ್ಲೇಷಣೆ ಮುಖಾಂತರ ಹೇಳಿ ಪ್ರತಿ ಸ್ಪಂದನ ಉಂಟು ಮಾಡುವುದು ಕಷ್ಟ ಸಾಧ್ಯ"[5] ಇದು ತೇಜಸ್ವಿಯವರು ಅನುಭವಗಳ ಮೂಲಕ ಕಂಡುಕೊಂಡ ಸತ್ಯವಾಗಿದೆ. ಇಲ್ಲಿ ನಿಸ್ಸಹಾಯಕ ನೋವಿನ ದನಿಯೊಂದರ ಕಾಳಜಿ, ಆತಂಕಗಳು ಕಾಣಿಸುತ್ತವೆ.

ತೇಜಸ್ವಿಯವರ ಹಲವು ಆಸಕ್ತಿಗಳಲ್ಲಿ ಛಾಯಾಗ್ರಹಣವು ಒಂದು. ಇವರು ಪ್ರಾಣಿ–ಪಕ್ಷಿಗಳ ಫೋಟೋ ತೆಗೆಯುವ ಸಂದರ್ಭದಲ್ಲಿ ಹಲವು ಸಮಸ್ಯೆಗಳನ್ನು ಎದುರಾದಂತಹವರು. ಹೀಗಾಗಿ "ಇದನ್ನೆಲ್ಲಾ ಅನುಭವಿಸಿ ಬೇಸರಗೊಂಡ ನಾನು ಹೇಗಾದರೂ ಮಾಡಿ ಈ ಹಕ್ಕಿಗಳನ್ನೆಲ್ಲ ನಾನೇ ಸಾಕಿ ಅವುಗಳಿಗೆ ಮನುಷ್ಯರ ಭಯ ಇಲ್ಲದಂತೆ ಬಳಕೆ ಮಾಡಿಕೊಂಡರೆ ಅನಂತರ ಅವುಗಳ ಫೋಟೋಗಳನ್ನು ಹತ್ತಿರದಿಂದಲೇ ಹೇಗೆಬೇಕೋ ಹಾಗೆ ತೆಗೆಯಬಹುದಲ್ಲವೆ ಎಂದು ಯೋಚನೆ ಮಾಡುತ್ತಿದೆ. ಆದರೆ ಈ ಯೋಚನೆ ಅವುಗಳ ಫೋಟೋ ತೆಗೆಯುವುದಕ್ಕಿಂತ ನೂರುಪಟ್ಟು ಕಷ್ಟಕರವಾದುದು ಎಂದು ಬಹುಬೇಗ ಮನವರಿಕೆಯಾಯ್ತು"[6] ಈ ಮಾತಿಗೆ ತೇಜಸ್ವಿಯವರಲ್ಲಿ ಪಕ್ಷಿಗಳ ಬಗೆಗೆ ಇದ್ದಂತಹ ಅಭಿಪ್ರಾಯ ಹುಸಿಯಾದುದ್ದೇ ಕಾರಣವಾಗಿದೆ. ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಅನಿವಾರ್ಯವಾಗಿ ಪಿಕಳಾರ, ಟುವ್ವಿ ಹಕ್ಕಿ, ಆಕಾಶಬಗರೆ ಇಂತಹ ಪಕ್ಷಿಗಳನ್ನು ಸಾಕಲೇಬೇಕಾದಾಗ ಪ್ರಕೃತಿ ನಮ್ಮ ಊಹೆಗೂ ನಿಲುಕದ ಎಂಥ ಜಟಿಲ ಜೀವಜಾಲ ಎಂಬುದು ಅರಿವಾಗುತ್ತದೆ. ಪಕ್ಷಿಗಳನ್ನು ಸಾಕಿ, ಬೇಕಾದ ಹಾಗೆ ಫೋಟೋ ತೆಗೆಯುವ ಯೋಜನೆಯು ಎಷ್ಟು ಕಷ್ಟಕರವಾದದ್ದು ಮತ್ತು ಅಸಾಧ್ಯವಾದುದು ಎಂಬುದು ತಿಳಿಯುತ್ತಲೇ ಪ್ರಕೃತಿಯ ನಿಗೂಢತೆಯು ಅಭೇದ್ಯವಾಗಿ ಮತ್ತಷ್ಟು ನಿಗೂಢವಾಗಿ ಉಳಿಯುತ್ತದೆ. ಆ ಪಕ್ಷಿಗಳಿಗೆ ಹೊರಗಿನ ಪರಿಸರದಿಂದ, ತಾಯಿಯಿಂದ ಸಿಗಬೇಕಾದ ಶಿಕ್ಷಣ ಸಿಗದೆ ಸಾಯುವುದನ್ನೂ ನೋಡಿದ ಮೇಲೆ ಅದೊಂದು ಜಟಿಲ ಜೀವಜಾಲವೆಂಬುದು ಅರಿವಾಗುತ್ತದೆ.

ಇದೇ ರೀತಿ ಕಾಡು ಪ್ರಾಣಿ–ಪಕ್ಷಿಗಳಿಗೆ ಮನುಷ್ಯನ ಪ್ರೀತಿ, ವಿಶ್ವಾಸ, ಸಹಾಯ ಹಸ್ತವಾದರೂ ಅವುಗಳ ನಾಶ ತಪ್ಪಿದ್ದಲ್ಲ ಎಂಬುದು ಸ್ವಲ್ಪ ದಿನಗಳ ಕಾಲ ಸ್ನೇಹಿತನಾಗಿ ಉಳಿದು ಆ ಸ್ನೇಹದ ಕಾರಣದಿಂದಲೇ ಸಾವನ್ನಪ್ಪಿದ ಗದ್ದೆಗೊರವ ಹಕ್ಕಿಯ ಘಟನೆಯಿಂದ ಮನವರಿಕೆಯಾಗುತ್ತದೆ. ತಮ್ಮ ಗಾಳಕ್ಕೆ ಸಿಕ್ಕಿ ಬಲಿಯಾದ ಈ ಹಕ್ಕಿಯಿಂದ ಮನುಷ್ಯನ ಸ್ನೇಹ, ವಿಶ್ವಾಸಗಳು ಕಾಡಿನ ಪ್ರಾಣಿಗಳಿಗೆ ಕ್ರೌರ್ಯ, ದ್ರೋಹಗಳಷ್ಟೇ ಅಪಾಯಕಾರಿ ಎಂದು ತಿಳಿದು ಇನ್ನು ಮೇಲೆ ಮಾತ್ರ ಯಾವುದೇ

ಸಂದರ್ಭದಲ್ಲೂ ಕಾಡಿನ ಪ್ರಾಣಿಗಳೊಡನೆ ವಿಶ್ವಾಸ ಸಲುಗೆ ಬೆಳೆಸಲೇಕೂಡದೆಂದು ನಿರ್ಧರಿಸುತ್ತಾರೆ. ಈ ಪ್ರಸಂಗದಲ್ಲಿ ಒಂದು ಕಾಡಿನ ಹಕ್ಕಿ ತನ್ನ ಅಪನಂಬಿಕೆಗಳನ್ನೆಲ್ಲ ಮೀರಿ ಮನುಷ್ಯನಿಗೆ ಇಷ್ಟು ಸ್ನೇಹಿತನಾಗಲು ಸಾಧ್ಯವೇ? ಎಂದು ಮೊದಲು ಅಚ್ಚರಿಗೊಳ್ಳುತ್ತಾರೆ. ಅಷ್ಟರಮಟ್ಟಿಗೆ ಅವರನ್ನು ಒಲಿಯುತ್ತದೆ. ಮನುಷ್ಯನ ವರ್ತನೆ ಎಲ್ಲರಲ್ಲೂ ಒಂದೇ ತೆರನಾಗಿ ಇರುವಂತಹದ್ದಲ್ಲ ಅವರ ಪ್ರೀತಿ, ವಿಶ್ವಾಸ, ಸ್ನೇಹಭಾವನೆಗಳ ಹಿಂದೆ ಸ್ವಾರ್ಥ, ಕ್ರೂರವರ್ತನೆ ಕೆಲಸ ಮಾಡುತ್ತಲೇ ಇರುತ್ತದೆ. ಈ ಅರಿವಿನ ಮೇರೆಗೆ ಗದ್ದೆಗೊರವ ಹಕ್ಕಿಯನ್ನು ದೂರವಿಡಲು ಪ್ರಯತ್ನಿಸುತ್ತಾರೆ. ಮುಗ್ಧಹಕ್ಕಿ ಮನುಷ್ಯನ ವರ್ತನೆಯನ್ನು ಅರ್ಥಮಾಡಿಕೊಳ್ಳಲು ವಿಫಲವಾಗುತ್ತದೆ. ಯಾರೂ ಆ ಹಕ್ಕಿಯ ಯೋಗಕ್ಷೇಮದ ಬಗೆಗೆ ಚಿಂತಿಸುತ್ತಿರುತ್ತಾರೋ ಅವರಿಂದಲೇ ತನ್ನ ಪ್ರಾಣ ಕಳೆದುಕೊಳ್ಳುತ್ತದೆ. ಕಾಡಿನ ಪಕ್ಷಿಗಳ ಜೀವನದಲ್ಲಿ ಮನುಷ್ಯನ ಹಸ್ತಕ್ಷೇಪ, ಅವನು ತೋರಿಸುವ ಔದಾರ್ಯ, ಪ್ರೀತಿಗಳು ಎಷ್ಟು ಅಪಾಯಕಾರಿ ಎಂಬುದನ್ನು ಹೀಗೆ ಹಲವು ಅನುಭವಗಳ ಮೂಲಕ ವಿವರಿಸುತ್ತಾರೆ.

ಮನುಷ್ಯ ಪರಿಸರದ ಒಂದಂಶವಾದರೂ ಪರಿಸರದಲ್ಲೇ ಇರಬಹುದಾದ ಪ್ರಾಣಿ-ಪಕ್ಷಿಗಳನ್ನು, ಮರ-ಗಿಡ, ಬೆಟ್ಟಗುಡ್ಡ, ಜಲ ಹೀಗೆ ಇವುಗಳೆಲ್ಲವಕ್ಕೂ ತನ್ನನ್ನೇ ಕೇಂದ್ರವಾಗಿಸಿಕೊಂಡು ಅವೆಲ್ಲವುಗಳ ಇರುವಿಕೆಯು ತನ್ನ ಉಪಭೋಗಕ್ಕೆ ಮಾತ್ರ ಎಂದು ಪ್ರತಿಯೊಂದರ ಮೇಲೂ ತನ್ನ ಪ್ರಭುತ್ವವನ್ನು ಸಾಧಿಸಲು ಪಳಗಿಸಿ ಬಳಸಿಕೊಳ್ಳುವ ನೆಲೆಯನ್ನು ತೇಜಸ್ವಿ ಹಲವು ಕಡೆ ಪ್ರಶ್ನಿಸುತ್ತಾರೆ. ತೇಜಸ್ವಿಯವರಿಗೆ ಪರಿಸರದ ಅನೇಕ ಅಂಶಗಳು ಹೇಗೆ ನಿಗೂಢವೆನಿಸುತ್ತವೋ ಹಾಗೆ ಮನುಷ್ಯನು ನಿಗೂಢವಾಗೇ ಉಳಿಯುತ್ತಾನೆ. ಹಲವು ಸಂದರ್ಭಗಳಲ್ಲಿ ಪ್ರಾಣಿ-ಪಕ್ಷಿಗಳ ಬಗೆಗೆ ತಳೆಯುವ ನಿಲುವನ್ನೇ ಮನುಷ್ಯನ ವಿಷಯದಲ್ಲೂ ತಳೆಯುತ್ತಾರೆ. ಹಾಗಾಗಿ ಹಲವು ಸಂದರ್ಭಗಳಲ್ಲಿ ಯಾವುದನ್ನೂ ನಿರ್ಣಯಿಸದೆ, ಇರುವುದನ್ನು ಇದ್ದಹಾಗೆ ವಿವರಿಸಿಬಿಡುವ ಕ್ರಮವನ್ನು ಗಮನಿಸಬಹುದಾಗಿದೆ.

"ಮಾನವ ಕೇಂದ್ರಿತ ನಿಸರ್ಗಾನುಸಂಧಾನವನ್ನು ಅವರು ಪ್ರಶ್ನಿಸುತ್ತಲೇ ಹೋಗುತ್ತಾರೆ. ಉದಾ: ಕೈತಪ್ಪಿ ಹೋಗುತ್ತಿರುವ ಉಡುವನ್ನು ಕಂಡ ಮಾರ ತೇಜಸ್ವಿಯವರಿಗೆ "ಅದನ್ನು ಹೊಡೆಯಕೊಡಿ ನಾನಾದರೂ ಹುರಿದು ತಿನ್ನುತ್ತೇನೆ, ಇಲ್ಲದಿದ್ದರೆ ಕಾಡಿನಲ್ಲಿ ನಾಯಿನರಿ ತಿಂದು ಅನ್ಯಾಯ ಆಗುತ್ತದೆ ಎನ್ನುತ್ತಾನೆ. ಅದಕ್ಕೆ ನಾಯಿನರಿ ತಿಂದರೆ ಅನ್ಯಾಯ ತಾನು ತಿಂದರೆ ನ್ಯಾಯ ಎಂದು ಯಾವ ತತ್ವದ ಮೇಲೆ ನಿರ್ಧರಿಸಿದನೋ ಎಂದು ಅವರು ಪ್ರಶ್ನಿಸುತ್ತಾರೆ"[7]

ಮಾರನಿಗಿಂತ ಭಿನ್ನರಾದ ಭೈರ ಮತ್ತು ಮಾಸ್ತಿ ತೋಟದ ಕೆಲಸದ ಆಳುಗಳು ಇವರು ತಾವು ಸಾಕಿಕೊಂಡಿದ್ದ ನಾಯಿ ರಾಮನನ್ನು ನಡೆಸಿಕೊಳ್ಳುವ ರೀತಿಯೂ ಕ್ರೂರವೇ ಆಗಿದೆ. ಶಿಕಾರಿಯಲ್ಲಿ ರಾಮ ಎಷ್ಟೇ ಸಹಾಯ ಮಾಡಿದರೂ ಅದರ ಬಗ್ಗೆ ಸ್ವಲ್ಪವೂ ಕರುಣೆಯನ್ನು ತೋರದ ಭೈರ,

ಮಾಸ್ತಿಯರ ಬಗ್ಗೆ ತೇಜಸ್ವಿಯವರಿಗೆ ಅಸಮಾಧಾನವು ಉಂಟು. ನಾಯಿಯನ್ನು ನಾಯಿಯಂತೆಯೂ, ಮನುಷ್ಯರನ್ನು ಮನುಷ್ಯರಂತೆಯೂ, ಪ್ರಾಣಿಗಳನ್ನು ಪ್ರಾಣಿಗಳಂತೆಯೂ ನೋಡುತ್ತಿದ್ದರಷ್ಟೇ. ನಾಯಿಗೆ ನಾವು ಮಾಡುವಂತೆ ಮಾನವೀಯ ವ್ಯಕ್ತಿತ್ವವನ್ನು ಆರೋಪಿಸುತ್ತಿರಲಿಲ್ಲ ಎಂದು ಅವರಲ್ಲಿನ ನಿರ್ದಯತೆಯನ್ನು ಹೇಳುತ್ತಾ ಅಷ್ಟು ವರುಷ ಜೊತೆಗಿದ್ದ ರಾಮನು ಅನಿರೀಕ್ಷಿತ ಕಾರಣದಿಂದ ಸತ್ತಾಗ ಅದರ ಬಗ್ಗೆ ಮರುಕಪಡದೆ, ಅದನ್ನು ಹೂಳದೆ, ಬೈಯ್ದು ಬರುವ ಭೈರನ ನಿಷ್ಕರುಣೆಯನ್ನು ಕಂಡು ನಿರೂಪನಿಗೆ ಅವರ ಆ ವರ್ತನೆಯಿಂದ ಆಶ್ಚರ್ಯದ ಜೊತೆಗೆ ಬೇಸರವೂ ಆಗುತ್ತದೆ. ಇಲ್ಲೆಲ್ಲ ಮನುಷ್ಯ ತನ್ನ ಪರಿಸರದಲ್ಲಿನ ಇತರ ಪ್ರಾಣಿಗಳನ್ನು ಕೇವಲ ಉಪಯೋಗದ, ಉಪಭೋಗದ ವಸ್ತುವನ್ನಾಗಿ ನೋಡುತ್ತಾನಲ್ಲದೆ, ಅದರ ಅಸ್ತಿತ್ವದ ಬಗ್ಗೆ ಯೋಚಿಸಲೂ ಕೂಡ ಹೋಗುವುದಿಲ್ಲ.

ತೇಜಸ್ವಿಯವರ ಎಷ್ಟೋ ಶಿಕಾರಿಯ ಅನುಭವಗಳು ಅವರಿಗೆ ಶಿಕಾರಿಯಲ್ಲಿದ್ದ ಆಸಕ್ತಿಯನ್ನು ತೋರಿಸುತ್ತದೆ. ಶಿಕಾರಿಗೆ ಹೋದ ಸಂದರ್ಭದಲ್ಲಿ ಎಷ್ಟೇ ಸುಸ್ತಾದರೂ ಪ್ರಾಣಿ ಕಂಡ ಕೂಡಲೇ ಕೋವಿ ಈಡನ್ನು ಆರಿಸುತ್ತಿದ್ದವರು ತದನಂತರದಲ್ಲಿ ಅವುಗಳ ರಕ್ಷಣೆಗೆ ಮುಂದಾಗುವುದು ಗಮನಾರ್ಹವಾದ ಸಂಗತಿಯಾಗಿದೆ. ತಮ್ಮ ಮನೆಯ ಸುತ್ತಮುತ್ತ ಸಣ್ಣಪುಟ್ಟ ಕಾಡುಪ್ರಾಣಿಗಳನ್ನು ಶಿಕಾರಿ ಮಾಡಿ ಅವುಗಳನ್ನೆಲ್ಲ ನಾಶ ಮಾಡುತ್ತಿದ್ದವರ ಬಗ್ಗೆ ಅಸಮಾಧಾನಗೊಂಡು ಹೇಗಾದರೂ ಆ ಕಾಡುಪ್ರಾಣಿಗಳನ್ನು ರಕ್ಷಿಸಲು ಮುಂದಾಗುತ್ತಾರೆ. ಕಳ್ಳ ಶಿಕಾರಿಗಾರರ ಇತರೆ ಹೊಂಚುಗಳನ್ನು ತಿಳಿದು ಕುಪಿತಗೊಳ್ಳುತ್ತಾರೆ. "ನಾವೇನೂ ಅನ್ನ ಹಾಕಿ ಸಾಕಿಲ್ಲದ ಕಾಡುಪ್ರಾಣಿಗಳನ್ನು ಕೊಂದು ತಿನ್ನುವುದು ಅವರ ಆಜನ್ಮಸಿದ್ಧ ಹಕ್ಕೆಂದು ನಿಸ್ಸಂಕೋಚವಾಗಿ ನಂಬಿದ್ದರು"[8] ಎನ್ನುವ ಮಾತು ಕೇವಲ ಮನುಷ್ಯ ಕೇಂದ್ರಿತ ನೆಲೆಯಿಂದ ಸದಾ ಆಲೋಚಿಸುವ ಇಡೀ ವರ್ಗವನ್ನೇ ಟೀಕಿಸುವಂತಿದೆ. ತೇಜಸ್ವಿಯವರ 'ಚಿದಂಬರ ರಹಸ್ಯ', 'ಅಬಚೂರಿನ ಪೋಸ್ಟಾಫೀಸು', 'ಜುಗಾರಿಕ್ರಾಸ್', 'ಅವನತಿ' ಮುಂತಾದ ಕೃತಿಗಳಲ್ಲಿ ಮನುಷ್ಯ ಹೇಗೆ ಧಾರ್ಮಿಕ, ಕೌಟುಂಬಿಕ, ಶೈಕ್ಷಣಿಕ, ರಾಜಕೀಯ, ಪ್ರಾಕೃತಿಕ ಪರಿಸರವನ್ನು ಕಲುಷಿತಗೊಳಿಸಿ ತಾನೂ ರೋಗಗ್ರಸ್ಥನಾಗಿ ಅವನತಿಯ ಹಾದಿ ಹಿಡಿದಿದ್ದಾನೆ ಎಂಬುದರ ಚಿತ್ರಣವನ್ನು ನೋಡಬಹುದು.

ಇನ್ನು ಮನುಷ್ಯನ ಬುದ್ಧಿಗೆ ನಿಲುಕದ ಎಷ್ಟೋ ಘಟನೆಗಳು ಪರಿಸರದಲ್ಲಿ ಸದಾ ಜರುಗುತ್ತಲೇ ಇರುತ್ತವೆ. ಅವುಗಳನ್ನೆಲ್ಲ ತಿಳಿದು ತನಗೆ ಬೇಕಾದ ರೀತಿಯಲ್ಲಿ ಉಪಯೋಗಿಸಿಕೊಳ್ಳಬೇಕೆಂಬ ಆಸೆಯಿಂದ ಅದರ ವಿಷಯಕ್ಕೆ ಕೈ ಹಾಕಿದರೆ ನಮಗೆ ಸುಳಿವೇ ನೀಡದ ಹಾಗೆ ಅವೆಲ್ಲವೂ ಕಣ್ಮರೆಯಾಗಿ ನಮ್ಮನ್ನು ವಿಸ್ಮಯಗೊಳಿಸುತ್ತವೆ. ಇಂತಹುದೇ ಒಂದು ಘಟನೆ "ಒಂದು ಝರಿಯ ಜಾಡಿನಲ್ಲಿ" ಎಂಬ ಕತೆಯಲ್ಲಿ ಬರುತ್ತದೆ. ಇಲ್ಲಿ ಉಕ್ಕುವ ನೀರಿನ ಪ್ರಮಾಣವನ್ನು ಹೆಚ್ಚಿಸಲು ನಿರೂಪಕ ಅಲ್ಲಿನ ಜರಿ ಗಿಡಗಳನ್ನೆಲ್ಲ ಕಿತ್ತು ನೀರು ಸರಾಗವಾಗಿ ಹರಿಯುವಂತೆ ಮಾಡುತ್ತಾನೆ. ಆದರೆ

ತಾನು ಮಾಡಿದ ಉಪಾಯ ನೀರಿನ ಸೆಲೆಯನ್ನೇ ಇಲ್ಲವಾಗಿಸುತ್ತೆಂಬ ಕಲ್ಪನೆ ಕೂಡ ಅವನಲ್ಲಿರಲಿಲ್ಲ. ಎಲ್ಲವನ್ನೂ ತನ್ನ ರೀತಿಯಲ್ಲೇ ನಿರ್ಣಯಿಸಿ, ಹಾಗೇ ಮುಂದುವರಿಯಬೇಕೆಂಬ ಮನುಷ್ಯನ ಆಸೆಯನ್ನು ಮಣ್ಣುಗೂಡಿಸಿ ಪ್ರಕೃತಿ ತನ್ನ ರಹಸ್ಯವನ್ನು ಕಾಪಾಡಿಕೊಳ್ಳುವುದನ್ನಿಲ್ಲಿ ನೋಡಬಹುದಾಗಿದೆ.

ಪರಿಸರದಲ್ಲಿ ನಡೆಯುವ ಘಟನೆಗಳು ಮನುಷ್ಯನಿಗೆ ಅಬೇಧ್ಯವೆನಿಸಿದಷ್ಟು ಕುತೂಹಲದಿಂದ ಅಲ್ಲಿನ ರಹಸ್ಯವನ್ನು ಬಯಲಿಗೆಳೆಯಲು ಪ್ರಯತ್ನಿಸುತ್ತಲೇ ಇರುತ್ತಾನೆ. ಈ ನಿಟ್ಟಿನಲ್ಲಿ ವಿಜ್ಞಾನಿಗಳು ಸತತವಾಗಿ ಹಲವು ಸಂಶೋಧನೆಗಳನ್ನು, ಪ್ರಯೋಗಗಳನ್ನು ಮಾಡಲು ಇವುಗಳು ಪ್ರೇರೇಪಿಸುತ್ತಲೇ ಇರುತ್ತವೆ. ಆದರೆ ವಿಜ್ಞಾನಿಯಾದವನು ಕೊನೆಗೂ ಎದುರಾಗುವುದು ಅವನ ಬುದ್ಧಿಗೆ ನಿಲುಕದ ಯಾವುದೋ ಒಂದು ವಿಸ್ಮಯಕಾರಿ ನಿಗೂಢತೆಯನ್ನೇ. ವಿಜ್ಞಾನ ಎಷ್ಟೇ ಮುಂದುವರಿದಿದ್ದರೂ ಅಥವಾ ನಾವು ಆ ರೀತಿ ಭಾವಿಸಿಕೊಂಡಿದ್ದರೂ ಪರಿಸರದಲ್ಲಿ ಸಾಮಾನ್ಯ ಎಂದು ನಾವು ಪರಿಗಣಿಸುವ ವಿಷಯ/ ವಸ್ತುವೇ ವಿಜ್ಞಾನಕ್ಕೆ ಬಿಡಿಸಲಾಗದ ಕಗ್ಗಂಟಾಗಿ ಕಂಡುಬರುತ್ತದೆ. ಇಂತಹ ಹಲವಾರು ಘಟನೆಗಳನ್ನು ತೇಜಸ್ವಿಯವರು ತಮ್ಮ ಕೃತಿಗಳಲ್ಲಿ ಅನಾವರಣಗೊಳಿಸುತ್ತಾ ಹೋಗುತ್ತಾರೆ. ಇಲ್ಲಿ ಪ್ರಮುಖವಾಗಿ ವಸ್ತುವಿನ ಬೆಳವಣಿಗೆ, ಶೈಲಿಯೇ ಗಮನ ಸೆಳೆಯುತ್ತದೆ. ಏಕೆಂದರೆ ತೇಜಸ್ವಿ ತಾವು ಕಂಡ ಯಾವುದೋ ಒಂದು ಪ್ರಾಣಿ–ಪಕ್ಷಿಗಳ ಬಗೆಗೆ ವಿವರ ನೀಡುತ್ತಲೇ ಅದನ್ನು ವಿಸ್ತರಿಸುತ್ತಾ ವಿಶ್ವಾತ್ಮಕತೆ ಕಡೆಗೆ ಕೊಂಡೊಯ್ಯುತ್ತಾರೆ. 'ಹೆಜ್ಜೆ ಮೂಡದ ಹಾದಿ' ಕೃತಿಯಲ್ಲಿ ಬರುವ 'ಬಾವಲಿ'ಯ ಕತೆ ತಾವು ಚಿಕ್ಕವಯಸ್ಸಿನವರಿದ್ದಾಗ ಬಾವಲಿಯ ವಿಚಿತ್ರ ರೂಪವನ್ನು ನೋಡಿ ಪಿಶಾಚಿಯೆಂದು ಹೆದರಿ ಓಡಿಹೋಗಿರುತ್ತಾರೆ. ಹಾಗೆಯೇ ಅದನ್ನು ಮತ್ತೆ ಮರದ ಮೇಲೆ ಕಂಡಾಗ ಅದರ ಜೀವನಶೈಲಿ, ಆಹಾರಪದ್ಧತಿ ಇತ್ಯಾದಿ ವಿಷಯಗಳ ಬಗ್ಗೆ ಕುತೂಹಲಗೊಂಡಿರುತ್ತಾರೆ. ಇಲ್ಲಿಂದ ಬಿಚ್ಚಿಕೊಳ್ಳುವ ಈ ಪಕ್ಷಿಯ ವಿವರಣೆ ಇಡೀ ಜಗತ್ತಿನಾದ್ಯಂತ ಇದರ ಮೇಲೆ ನಡೆದಿರಬಹುದಾದ ಸಂಶೋಧನೆಗಳವರೆವಿಗೂ ಮುಂದುವರಿಯುತ್ತಾ ಹೋಗುತ್ತದೆ.

ಇಟಲಿಯಲ್ಲಿ ಲಸೆರೋಸ್ಪಲಾನಿ ಎಂಬ ಪಾದ್ರಿ ಬಾವಲಿಗಳ ಬಗ್ಗೆ ಕುತೂಹಲಗೊಂಡು ಮೊದಲಬಾರಿಗೆ ಅವುಗಳ ಮೇಲೆ ಪ್ರಯೋಗಗಳನ್ನು ನಡೆಸಿ ಅವುಗಳ ವಿಚಿತ್ರ ವರ್ತನೆಯನ್ನು, ಶಕ್ತಿಯನ್ನು ಕಂಡು ಬೆರಗಾಗುತ್ತಾನೆ. ನಂತರ ಚಾರ್ಲಸ್ ಜೂರ್ನೆ ಇದೇ ರೀತಿಯ ಪ್ರಯೋಗದಲ್ಲಿ ಮುಂದಾಗಿ ಬಾವಲಿಗಳಿಗೆ ಕಿವಿ ಮುಚ್ಚಿದರೆ ಅವು ಕುರುಡಾಗುತ್ತವೆ ಎಂದು ಘೋಷಿಸಿದ. ಇವರಿಬ್ಬರ ನಿರ್ಣಯದಿಂದ ಜನರು ತಾಳ್ಮೆ ಕಳೆದುಕೊಂಡು ಈ ಇಬ್ಬರೂ ವಿಜ್ಞಾನಿಗಳು ಅವಿವೇಕಿಗಳೆಂದು ತೀರ್ಮಾನಿಸಿದರು. "ಪಾದ್ರಿ ಧರ್ಮ ಬೋಧನೆ ಮಾಡುವುದನ್ನು ಬಿಟ್ಟು ದೈವನಿಯಮಗಳಿಗೆ ವ್ಯತಿರಿಕ್ತವಾದ ತರ್ಕ ಮಾಡುತ್ತಿದ್ದಾನೆ, ಧರ್ಮ ವಿರೋಧಿ ಹುಚ್ಚಾಟಗಳಲ್ಲಿ ತೊಡಗಿ ಬಾವಲಿಗಳಿಗೆ ಕಾಟ ಕೊಡುತ್ತಿದ್ದಾನೆಂದು ನಿಂದಿಸಿದರು"[49]

ಪ್ರಕೃತಿ ಎಷ್ಟೊಂದು ರಹಸ್ಯಗಳನ್ನು ತನ್ನಲ್ಲೇ ಅಡಗಿಸಿಕೊಂಡಿದೆ. ಆದರೆ ಜನರು ತಮ್ಮ ಧಾರ್ಮಿಕ ನಂಬಿಕೆಗಳನ್ನು ಹುಸಿಯಾಗಿಸುವ ಸತ್ಯವನ್ನು ಒಪ್ಪಲಾರರು ಎಂಬುದಕ್ಕೆ ಈ ಘಟನೆ ಸಾಕ್ಷಿಯಾಗಿದೆ. ಪಾದ್ರಿ ಬಾವಲಿಗಳ ಬಗ್ಗೆ ಕುತೂಹಲ ವ್ಯಕ್ತಪಡಿಸಿದ 250 ವರ್ಷಗಳ ತರುವಾಯ ವಿಜ್ಞಾನಿಗಳು ಬಾವಲಿಗಳ ಅತೀಂದ್ರಿಯ ರಹಸ್ಯ ತಿಳಿಯುವ ಹತ್ತಿರ ಬಂದಿದ್ದರು. ಇವುಗಳ ಅದ್ವಿತೀಯ ಮತ್ತು ರಹಸ್ಯಮಯ ಚಲನ ಸಾಮಾರ್ಥ್ಯ ವಿಜ್ಞಾನಿಗಳ ತಲೆಯನ್ನು ಸಾಕಷ್ಟು ಬಿಸಿಮಾಡಿತ್ತು. ಶ್ರವಣಾತೀತ ಶಬ್ದಗಳು ಅವುಗಳ ಅದ್ಭುತ ಶಕ್ತಿಯೆಂಬುದು ತಿಳಿಯಿತು. ಈ ಶಕ್ತಿ ಬೇರೆ ಯಾವ ಪ್ರಾಣಿಗಳಿಗಾಗಲಿ, ಮಾನವ ನಿರ್ಮಿತ ಯಂತ್ರಗಳಿಗಾಗಲಿ ಇಲ್ಲವೆಂದು ಘೋಷಿಸಿದರು. ಆದರೆ ಈ ರೀತಿಯ ಸೃಷ್ಟಿ ವೈಚಿತ್ರ್ಯಗಳು ವಿಜ್ಞಾನಿಗಳನ್ನು ಬೆರಗುಗೊಳಿಸುತ್ತಲೇ ಇವೆ.

ತೇಜಸ್ವಿಯವರಿಗೆ ಪರಿಸರದಲ್ಲಿನ ಪ್ರಾಣಿ-ಪಕ್ಷಿಗಳ ಹಾಗೆ ಮನುಷ್ಯನೂ ಕುತೂಹಲದ ಆಗರವೇ. ಅವನ ವರ್ತನೆ, ನಂಬಿಕೆಗಳೇ ಇದಕ್ಕೆ ಕಾರಣವಿರಬಹುದು. ಇವರ ಕೃತಿಗಳಲ್ಲಿ ಬರುವ ಮಾರ, ಚೇಂಕ್ರಮೇಸ್ತ್ರಿ ಅನಕ್ಷರಸ್ಥರಾದರೂ ಅನುಭವಿಗಳು. ಇವರುಗಳ ಮಾತಿನಲ್ಲಿ ಉತ್ಪ್ರೇಕ್ಷೆಯಿರಬಹುದಾದರೂ ಇವರ ಮಾತುಗಳನ್ನು ತಿರಸ್ಕರಿಸಲಾಗದು. ಏಕೆಂದರೆ ಕೆಲವೊಮ್ಮೆ ಅವು ಸತ್ಯವೆಂದು ನಿರೂಪಿತವಾಗಿ ಬಿಡುತ್ತದೆ. ಉದಾ:- ಉಡದ ಘಟನೆ. ಅನಿರೀಕ್ಷಿತ ಸಂದರ್ಭವೊಂದರಲ್ಲಿ ಸಿಕ್ಕ ಉಡ/ ಮಾನೀಟರನ್ನು ಮರಕ್ಕೆ ಕಟ್ಟಿಹಾಕಿರುತ್ತಾರೆ. ಬೆಳಗ್ಗೆ ನೋಡುವ ವೇಳೆಗೆ ಹಗ್ಗದ ಸಮೇತ ಅದು ಮರದ ಮೇಲೆ ಹೋಗಿ ಕುಳಿತಿರುತ್ತದೆ. ಇದನ್ನು ನೋಡಿದ ಮಾರ ಖಿನ್ನನಾಗಿ ಉಡವನ್ನು ಏನು ಮಾಡಿದರೂ ಕೆಳಗೆ ಇಳಿಸುವುದಕ್ಕಾಗುವುದಿಲ್ಲ. ಮರ ಕಡಿದಷ್ಟೇ ಅದನ್ನು ಬೀಳಿಸಬೇಕು. ಉಡದ ಹಿಡ್ತ ಪ್ರಾಣ ಹೋದರೂ ಬಿಡೋದಿಲ್ಲ ಎಂದು ವಿವರಿಸಿ ಅದನ್ನು ಇಳಿಸುವುದಕ್ಕೆ ಹೋದ ನಿರೂಪಕನಿಗೆ ಸವಾಲೆಸೆಯುತ್ತಾನೆ. ಆದರೆ ಅವನ ಮಾತನ್ನು ಹಾಸ್ಯ ಮಾಡಿ, ಕಡೆಗಣಿಸಿ ಹೋಗಿ ಮಾಡುವ ಪ್ರಯತ್ನವೆಲ್ಲವೂ ವ್ಯರ್ಥವಾಗುತ್ತದೆ. ಮಾರ ಒಬ್ಬ ಹಳ್ಳಿಮುಕ್ಕ, ದಡ್ಡ ಶಿಖಾಮಣಿ ಎಂದು ಭಾವಿಸಿದ್ದ ತೇಜಸ್ವಿಗೆ ಅವನಲ್ಲಿ ಅಸಾಧಾರಣವಾದ ತಿಳಿವಳಿಕೆಯೊಂದು ಮೂರ್ಖತನದ ಮುಸುಗಿನೊಳಗೆ ಕೆಲಸ ಮಾಡುತ್ತಿದ್ದುದು ಹಲವು ಸಂದರ್ಭಗಳಲ್ಲಿ ತಿಳಿಯುತ್ತಾ ಹೋಗುತ್ತದೆ.

ಮತ್ತೊಂದು ಸಂದರ್ಭದಲ್ಲಿ ತೋಟದ ಕಾವಲು ಕೆಲಸಕ್ಕೆ ಮುದುಕನಾದ ಮಾರನನ್ನು ನೇಮಿಸಿದಾಗ ಅವನು ಸರಿಯಾಗಿ ಕೆಲಸ ನಿರ್ವಹಿಸುತ್ತಾನೆಯೇ ಎಂಬ ಅನುಮಾನ ತೇಜಸ್ವಿಯವರಿಗೂ ಇರುತ್ತದೆ. ಆದರೆ ಅವರ ಅನುಮಾನವನ್ನು ಹುಸಿಗೊಳಿಸುವ ರೀತಿಯಲ್ಲಿ ಮಾರನ ತಂತ್ರಗಳು ಕೆಲಸ ಮಾಡುತ್ತವೆ. ಕಳ್ಳರನ್ನು ನಿಯಂತ್ರಿಸಲು ಮಾರ ದೇವರಿಗೆ ಕಾಂಟ್ರ್ಯಾಕ್ಟ್ ನೀಡಿರುವುದು ಆಶ್ಚರ್ಯ ಮೂಡಿಸುತ್ತದೆ. ಮಾರ ತೋಟದ ದಾರಿಯಲ್ಲಿದ್ದ ಚೌಡಿಮರಕ್ಕೆ ಅರಿಶಿನ ಕುಂಕುಮ ಇಟ್ಟು ದುಡ್ಡು ಹಾಕಿದ್ದು ಜನರಲ್ಲಿ ವಿಚಿತ್ರ ಗಾಬರಿ ಉಂಟು ಮಾಡಿತ್ತು. ಅವನ ಶ್ರದ್ಧೆಗೆ ಸೂಕ್ಷ್ಮವಾದ ಗಾಂಭೀರ್ಯ

ತಂದಿತ್ತು. ಚೌಡಿಗೆ ತಿಂಗಳಿಗೆ ತನ್ನ ಸಂಬಳದಲ್ಲಿ ಇಂತಿಷ್ಟೆಂದು ಪಾಲು ನೀಡಿ ಅದನ್ನೇ ತೋಟ ಕಾಯಲು ನೇಮಿಸುವ ಮಾರ ಕಳ್ಳರಿಗೆ ಭಯವನ್ನು ಈ ರೀತಿ ಹುಟ್ಟಿಸಿದ್ದ. ಅದುವರೆಗೆ ಯಾರೂ ನಿಯಂತ್ರಿಸಲಾರದ ಕಳ್ಳರ ಕಾಟವನ್ನು ಮಾರ ಧಾರ್ಮಿಕ ಚೌಕಟ್ಟಿನಲ್ಲೇ ನಿಯಂತ್ರಿಸುತ್ತಾನೆ. ಇಲ್ಲಿ ಅವನ ಬುದ್ಧಿವಂತಿಕೆ ನಿರೀಕ್ಷಿಸಲಾರದ ರೀತಿಯಲ್ಲಿ ಸಫಲವಾಗುವುದನ್ನು ನೋಡಬಹುದು. ಆದರೆ ಕೆಲವೊಮ್ಮೆ ಆತನ ಮಿತಿಮೀರಿದ ನಂಬಿಕೆಗಳು, ಕಟ್ಟುಕತೆಗಳ ದೆಸೆಯಿಂದ ಅವನ ಮಾತನ್ನು ಗಂಭೀರವಾಗಿ ಪರಿಗಣಿಸಬೇಕೇ, ಬೇಡವೇ ಎಂಬ ಗೊಂದಲವನ್ನು ಮೂಡಿಸುತ್ತದೆ.

ಮಾರನಂತೆ ಚೇಂಕ್ರ ಮೇಸ್ತ್ರಿಯೂ ಕೂಡ ಒಬ್ಬ ಅನಕ್ಷರಸ್ಥ. ಆದರೆ ಹಾವು ಮೀನಿನ ಬಗೆಗೆ ತೇಜಸ್ವಿ ಮೊದಲು ತಿಳಿದುಕೊಳ್ಳುವುದು ಚೇಂಕ್ರಮೇಸ್ತ್ರಿಯಿಂದ, ಮೀನು ಹಿಡಿಯಲು ಹೋಗುತ್ತಿದ್ದಾಗ ಪರಿಚಯವಾದ ಚೇಂಕ್ರ ಹಾವು ಮೀನಿನ ಬಗ್ಗೆ ವಿವರಿಸುತ್ತಾ ಅದರ ಸ್ವರೂಪ ಮತ್ತು ಜೀವನಶೈಲಿಯನ್ನು ಕುರಿತು ಕೆಲವೊಂದು ಮಾಹಿತಿಗಳನ್ನು ತನ್ನ ಅನುಭವದ ಹಿನ್ನೆಲೆಯಲ್ಲಿ ನೀಡುರುತ್ತಾನೆ. ಆದರೆ ಅದನ್ನು ತೇಜಸ್ವಿ ಗಂಭೀರವಾಗಿ ಪರಗಣಿಸುವುದು ಪುಸ್ತಕದಲ್ಲಿ ಓದಿದಾಗಲೇ. ಅರಿಸ್ಟಾಟಲನೂ ಎಷ್ಟೋ ವರ್ಷಗಳ ಹಿಂದೆ ಚೇಂಕ್ರ ಹೇಳಿದ ಮಾತನ್ನೇ ಹೇಳಿರುತ್ತಾನೆ. ಈ ರೀತಿಯ ಹಲವು ಸಂದರ್ಭಗಳಲ್ಲಿ ಹಳ್ಳಿಯ ಅನಕ್ಷರಸ್ಥರೆಂದು ಕಡೆಗಣಿಸದೆ ಅವರಲ್ಲಿನ ಜ್ಞಾನಕ್ಕೆ ಗೌರವ ನೀಡುವುದನ್ನು ನೋಡಬಹುದಾಗಿದೆ.

ತೇಜಸ್ವಿಯವರು ಪಡೆದ ದಟ್ಟಕಾಡಿನ ಅನುಭವಗಳನ್ನು ತಮ್ಮದನ್ನಾಗಿಸಿಕೊಳ್ಳಬೇಕೆಂಬ ಹಂಬಲದಿಂದ ಅನೇಕ ಓದುಗರು ಪತ್ರ ಬರೆದಾಗ ಅದಕ್ಕೆ ಪ್ರತಿಕ್ರಿಯಿಸುವ ದಾಟಿಯಲ್ಲಿ ಅವರು ನೀಡುವ ಉತ್ತರವು ತೇಜಸ್ವಿಯವರ ಸೂಕ್ಷ್ಮ ಸಂವೇದನೆಯನ್ನು ತೋರಿಸುತ್ತದೆ. "ಎಷ್ಟೋ ಜನ ನನ್ನ ಝುರಿ, ಹಕ್ಕಿ, ಕಾಡಿನ ಮೇಲಿನ ಲೇಖನ, ಪುಸ್ತಕಗಳನ್ನೆಲ್ಲ ಓದಿ ನಾವು ಅಲ್ಲಿಗೆ ಬಂದು ಇವನ್ನೆಲ್ಲ ನೋಡಬೇಕೆಂದಿದ್ದೇವೆಂದು ಕಾಗದ ಬರೆಯುತ್ತಾರೆ. ಆದರೆ ಮೊದಲನೆಯದಾಗಿ ಬಂದು ನೋಡುವವರಿಗಾಗಿ ಎಲ್ಲಿಯೂ ಯಾವುದೂ ಕಾದು ಕುಳಿತಿರುವುದಿಲ್ಲ. ಎರಡನೆಯದು ಇವನ್ನೆಲ್ಲ ನೋಡಲು ಎಲ್ಲಿಗಾಗಲಿ ಹೋಗಬೇಕಾದ ಅಗತ್ಯವೇ ಇಲ್ಲ. ನಾವು ಎಲ್ಲಿದ್ದೇವೋ ಅಲ್ಲೇ ಅತ್ತಿತ್ತ ಕಣ್ಣು ಬಿಟ್ಟು ನೋಡಿದರೆ ಸಾಕು. ಇಂಥವು ನೂರಾರು ಪವಾಡಗಳು ನಡೆಯುತ್ತಲೇ ಇರುತ್ತವೆ"[10] ಎಂಬ ಮಾತಿನಲ್ಲೇ ಅವರು ಪರಿಸರದಲ್ಲಿ ಜರುಗುತ್ತಿದ್ದ ಪ್ರತಿಯೊಂದು ಘಟನೆಯನ್ನು ಸೂಕ್ಷ್ಮವಾಗಿ ವೀಕ್ಷಿಸುತ್ತಿದ್ದ ರೀತಿ ಮತ್ತು ಆ ವಿಷಯ/ವಸ್ತುವಿನ ಬಗೆಗಿನ ಕುತೂಹಲ ಅವರನ್ನು ಕಾರ್ಯಶೀಲರನ್ನಾಗಿ ಮಾಡುತ್ತಿದ್ದ ಅಂಶವನ್ನು ಕೃತಿಯಲ್ಲಿ ಗಮನಿಸಬಹುದು. ಆದ್ದರಿಂದಲೇ ಬಿಡುವು ಸಿಕ್ಕರೆ ಕಾಲ ಕಳೆಯುವುದು ಹೇಗೆ ಎಂಬ ಚಿಂತೆ ನನಗೆ ಕಳೆದ 25 ವರ್ಷಗಳಲ್ಲಿ ಒಂದು ದಿನವೂ ಬರಲಿಲ್ಲ ಎಂದು ಅವರು ಹೇಳಿಕೊಳ್ಳುವುದು. ಸಾಯಂಕಾಲ ನಿದ್ದೆ ಬರುವವರೆಗೆ ತಲ್ಲೀನನಾಗುವಂತೆ ಸುತ್ತಮುತ್ತ ಏನಾದರೂ

ರೋಮಾಂಚಕ ಘಟನೆಗಳು ನಡೆಯುತ್ತಲೇ ಇರುತ್ತವೆ ಎಂದು ಅವರು ಹೇಳುವುದು. ಈ ರೀತಿಯ ಸೂಕ್ಷ್ಮಸಂವೇದನೆ ಮತ್ತು ಗ್ರಹಿಕೆ ತೇಜಸ್ವಿಯವರಲ್ಲಿರುವುದರಿಂದಲೇ ಕುತೂಹಲಗೊಂಡ ವಸ್ತುವಿನ ಬೆನ್ನೇರಿ ಶೋಧಕಾರ್ಯದಲ್ಲಿ ತೊಡಗುತ್ತಿದ್ದರೆನ್ನಿಸುತ್ತದೆ.

ಇಂತಹ ಒಂದು ಆಸಕ್ತಿ ಮತ್ತು ಕುತೂಹಲ ತೇಜಸ್ವಿಯವರನ್ನು ಸೂಕ್ಷ್ಮಗ್ರಹಿಕೆಯ ವ್ಯಕ್ತಿಯನ್ನಾಗಿ ಮಾಡಿತ್ತೆಂದರೆ ಅದಕ್ಕೆ ಕಾರಣ ಅವರೇ ಹೇಳಿಕೊಳ್ಳುವಂತೆ ಅವರ ತಂದೆ, ಸುತ್ತಮುತ್ತಲಿನ ಪರಿಸರವೇ ಆಗಿದೆ. ಚಿಕ್ಕವಯಸ್ಸಿನಿಂದಲೂ ತೇಜಸ್ವಿಯವರಿಗೆ ಪ್ರಾಣಿ-ಪಕ್ಷಿಗಳ ವರ್ತನೆಗಳು, ಜೀವನಶೈಲಿ ಹುಟ್ಟಿಸುತ್ತಿದ್ದ ಕುತೂಹಲ ಆಗ ನಡೆದ ಸಣ್ಣಪುಟ್ಟ ಘಟನೆಗಳೇ ಅವರನ್ನು ವಿಶ್ವಸಮಾಜದ ಹತ್ತಿರಕ್ಕೆ ಒಯ್ಯಲು ಸಹಾಯವಾಯಿತ್ತೆಂದು ಹೇಳಬಹುದು. ಆಗೆಲ್ಲ ಅವರ ತಂದೆ ಹೇಳುತ್ತಿದ್ದ ಕಾಡಿನ ಬೇಟೆಯ ರೋಮಾಂಚಕ ಅನುಭವಗಳೇ ತೇಜಸ್ವಿಯವರನ್ನು ಮತ್ತೆ, ತಾವು ಚಿಕ್ಕ ವಯಸ್ಸಿನಲ್ಲಿ ಕೇಳಿದ್ದ ಪರಿಸರಕ್ಕೆ ಕೊಂಡೊಯ್ಯುತ್ತೆನ್ನಬಹುದು. ಅವರ ತಂದೆ ಕಾಡಿನ ಅನುಭವಗಳ ಸರಣಿಯನ್ನು ಬಿಚ್ಚಿಟ್ಟಾಗ ಈ ಹುಡುಗ ಆಗಲೇ ಮಲೆನಾಡ ಪರಿಸರವನ್ನು ತನ್ನ ತಂದೆ ಏಕಾದರೂ ತೊರೆದು ಬಂದು ಈ ಮೈಸೂರಿನಲ್ಲಿ ನೆಲೆಸಿದರೋ ಎಂದು ವ್ಯಥೆ ಪಡುತ್ತಿತ್ತು. ತಮಗೆ ಗೊತ್ತಿಲ್ಲದಂತೆ ತಮ್ಮೊಳಗಿದ್ದ ಆಸಕ್ತಿ, ಕುತೂಹಲಗಳಿಗೆ ಸುತ್ತಮುತ್ತಲಿನ ಪರಿಸರದಿಂದ ಪೋಷಣೆ ಸಿಕ್ಕಿ ಅದು ಬೃಹದಾಕಾರವಾಗಿ ಬೆಳೆಯಿತ್ತೆನ್ನಬಹುದು. ಕೆಲವೊಮ್ಮೆ ತೇಜಸ್ವಿ ಪ್ರಕೃತಿಯನ್ನು ವರ್ಣಿಸಿರುವ ಸಂದರ್ಭದಲ್ಲೂ, ಪ್ರಾಣಿ-ಪಕ್ಷಿಗಳ ಉಪಮೆಗಳನ್ನು ಉಪಯೋಗಿಸುವುದನ್ನು ನೋಡಬಹುದು. "ಧಾರೆ ಧಾರೆಯಾಗಿ ಬೀಳುವ ಮಳೆಯನ್ನು, ಮೋಡಗಳೆಡೆಯಲ್ಲಿ ಹಾವು ಹರಿದಂತೆ ನುಸುಳುತ್ತಿದ್ದ ಬಳ್ಳಿ ಮಿಂಚನ್ನು ನೋಡುತ್ತ ನಿಂತೆ"[16] ಈ ವರ್ಣನೆ ಪ್ರಾಣಿ ಪಕ್ಷಿಗಳ ಮೇಲಿನ ತೇಜಸ್ವಿಯವರ ಪ್ರೀತಿ ಅವರ ಆಲೋಚನೆಗಳಲ್ಲೂ ಪ್ರಭಾವಿಸಿರುವುದನ್ನು ನೋಡಬಹುದು.

ಮನುಷ್ಯ ತನ್ನ ಸುತ್ತಮುತ್ತಲಿನ ಪರಿಸರದ ಮೇಲೆ ಪ್ರಭುತ್ವ ಸಾಧಿಸಿ ಅವುಗಳನ್ನು ಅವನತಿಯ ಹಾದಿ ಹಿಡಿಯುವಂತೆ ಮಾಡಿರುವಂತೆಯೇ ತನ್ನಿಂದಾದ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಪರಿಸರ ಎಲ್ಲವನ್ನು ಕಲುಷಿತಗೊಳಿಸಿ ತಾನೂ ರೋಗಪೀಡಿತನಾಗಿ ಮಾನಸಿಕವಾಗಿ ತೊಳಲಾಡುವುದನ್ನು, ಈ ರೀತಿಯ ಅವ್ಯವಸ್ಥೆಯ ಮಧ್ಯದಲ್ಲೇ ಎಲ್ಲ ಸಾಂಸ್ಥಿಕ ಚೌಕಟ್ಟುಗಳ ಬಿಗಿ ಹಿಡಿತದಿಂದ ಪಾರಾಗಿ ಜೀವಪರವಾಗಿ ಚಿಂತಿಸುತ್ತಾ ಬದುಕಲು ಪ್ರಯತ್ನಿಸುವ ಮನಸ್ಸುಗಳನ್ನು ತೇಜಸ್ವಿ ಗುರುತಿಸುತ್ತಾ ಕೃತಿಗಳಲ್ಲಿ ಮೂಡಿಸಿದ್ದಾರೆ. ತೇಜಸ್ವಿಯವರ 'ಅವನತಿ', 'ಚಿದಂಬರ ರಹಸ್ಯ', 'ಅಬಚೂರಿನ ಪೋಸ್ಟಾಫೀಸು' ಕೃತಿಗಳಲ್ಲಿ ಈ ರೀತಿಯ ಪರಿಸರದ ಚಿತ್ರಣವನ್ನು ಕಾಣಬಹುದಾಗಿದೆ.

'ಅವನತಿ' ಕತೆಯಲ್ಲಿ 'ಕಲೆ ಮತ್ತು ಸೌಂದರ್ಯ'ದ ಅವನತಿಯನ್ನು ಆ ಮೂಲಕ ಅಲ್ಲಿನ ವ್ಯಕ್ತಿಗಳ ಹಾಗೆಯೇ ಪರಿಸರದ ಅವನತಿಯನ್ನು ನೋಡಬಹುದಾಗಿದೆ. ಈ ಕತೆಯಲ್ಲಿ

ಸೂರಾಚಾರಿಯಲ್ಲಿರುವ ಅಸಾಮಾನ್ಯ ಕಲೆಗಾರಿಕೆಯನ್ನು ಗುರುತಿಸಲು ಅಶಕ್ತವಾದ ಸಾಮಾಜಿಕ ಪರಿಸರ ತಮ್ಮ ವಿಕೃತಮನಸ್ಸುಗಳಂತೆ ಆ ಕಲೆಯನ್ನು ವಿರೂಪಗೊಳಿಸುತ್ತಾ ಹೋಗುತ್ತದೆ. ಸೂರಾಚಾರಿಯ ಕೈಗೆ ಸಿದ್ಧಿಸಿದ್ದ ಶ್ರೇಷ್ಠ ಕಲಾವಂತಿಕೆ ಮಾರಿ, ಮಸಣಿಗಳನ್ನು ಮಾಡುತ್ತ ನಶಿಸಿಹೋಗಿ ಮಾನಸಿಕ ತೊಳಲಾಟದಿಂದ ಸೂರಾಚಾರಿ ಕುಗ್ಗಿಹೋಗುತ್ತಾನೆ. ಅವನ ಕಲೆಯಂತೆಯೇ, ಅವನ ಮನಸ್ಸು ವಿರೂಪಗೊಳ್ಳುತ್ತ ಅವನತಿಯ ಹಾದಿ ಹಿಡಿಯುತ್ತದೆ. ಇನ್ನೊಂದೆಡೆ ಇತ್ತಾವರದಲ್ಲಿ ಸೌಂದರ್ಯವೇ ಸಾಕ್ಷಾತ್ಕರಿಸಿದಂತಿದ್ದ ಗೌರಿ ಅಲ್ಲಿ ಒಂದು ಆಶ್ಚರ್ಯದ್ಭುತವಾಗಿದ್ದಳು. ಎಲ್ಲೂ ಕೊಂಕು ತೆಗೆಯದ ಹಾಗೆ ಇದ್ದ ಗೌರಿಯ ಸೌಂದರ್ಯದ ಬಗ್ಗೆ ಆಕೆಗಿದ್ದ ಅಸ್ಪಷ್ಟ ಪ್ರಜ್ಞೆಯೊಂದನ್ನು ಬಿಟ್ಟರೆ ಯಾರಿಗೂ ಅತ್ತ ಗಮನ ಹರಿದಿರಲಿಲ್ಲ. ಅದನ್ನು ಗಮನಿಸಲಾಗದ ಮಟ್ಟಿಗೆ ಅಲ್ಲಿನ ಜನರೂ ಕುರುಡರಾಗಿದ್ದರು. ಆದರೆ ಸೂರಾಚಾರಿ ಗೌರಿಯ ಸೌಂದರ್ಯವನ್ನು ಭಗ್ನಗೊಳಿಸುವ ಕಾರ್ಯಕ್ಕೆ ಕೈ ಹಾಕುವುದು ಸೂರಾಚಾರಿಯ ಕಲೆಯ, ಗೌರಿಯ ಸೌಂದರ್ಯದ ಅವನತಿಯೊಂದಿಗೆ ಅದಕ್ಕೆ ಕಾರಣವಾದ ಸಾಮಾಜಿಕ ಪರಿಸರವೊಂದರ ಅವನತಿಯನ್ನು ಈ ಕತೆ ವಿವರಿಸುತ್ತದೆ. ಯಾವಾಗಲೂ ಎಲ್ಲ ವಿಷಯದಲ್ಲೂ ನಿರಾಸಕ್ತಿಯಿಂದಿರುವ ಅಲ್ಲಿನ ಜನ ಸದಾಕಾಲ ಯಾವುದಾದರೊಂದು ತಾಪತ್ರಯದಲ್ಲಿ ಮುಳುಗಿ ಬಳಲುತ್ತಲೇ ಇರುತ್ತಾರೆ. ಕೊನೆಗೆ ಸೂರಾಚಾರಿ ಈ ಸಮಾಜದಿಂದ ಹೊರಬರಲಾಗದೆ ಪರಿತಪಿಸುತ್ತಾನೆ. ಅವನ ಬಗೆಗೆ ಕೊನೆಯ ಮಾತುಗಳಂತಿವೆ. "ಸೂರಾಚಾರಿ ತನ್ನ ವಿಧಿಯನ್ನು ತಾನೇ ಶಪಿಸತೊಡಗಿದ. ಸಿಕ್ಕುಬಿದ್ದ ಕೂದಲಿನಲ್ಲಿ ಓಡಾಡುವ ಬಾಚಣಿಗೆಯಂತೆ ಕರ್ಮಜಾಲದ ಬಾಗಿಲಿಲ್ಲದ ಕೋಣೆಯೊಳಗೆ ಬಿದ್ದಂತಾಯ್ತು ಅವನಿಗೆ"[12] ಇದು ಸೂರಾಚಾರಿ ಅವಸಾನ ಹೊಂದಿರುವುದನ್ನು ಸೂಚಿಸುತ್ತದೆ. ಈ ಕತೆಯಲ್ಲಿ ಬರುವ ಸೂರಾಚಾರಿ ಮತ್ತು ಗೌರಿ ಇಬ್ಬರಿಗೂ ತಮ್ಮಲ್ಲಿರಬಹುದಾದ ಅದ್ಭುತ ಕಲೆಗಾರಿಕೆ ಮತ್ತು ಸೌಂದರ್ಯ ತಿಳಿದಿಲ್ಲ. ಅದನ್ನು ಗುರುತಿಸಲು ದುರ್ಬಲವಾದ ರೋಗಗ್ರಸ್ಥ ಸಮಾಜ ಅದನ್ನು ಪೋಷಿಸುವ ಬದಲು ಭಗ್ನಗೊಳಿಸುತ್ತಲೇ ಮುನ್ನಡೆಯುತ್ತದೆ. ಹೀಗೊಂದು ಸಾಮಾಜಿಕ ಪರಿಸರದ ಅವನತಿಯ ಕತೆ ಇಲ್ಲಿದೆ.

'ಚಿದಂಬರ ರಹಸ್ಯ' ಕೃತಿಯಲ್ಲೂ ಜಡ್ಡುಗಟ್ಟಿ ಹೋಗಿರುವ ಪರಿಸರವೊಂದನ್ನು ಕಾಣಬಹುದಾಗಿದೆ. ಅದು ಅಲ್ಲಿ ಬೆಳೆಯುವ ಬೆಳೆಯಿಂದಿಡಿದು ಮಾನವ ನಿರ್ಮಿತಸಂಸ್ಥೆ ಮತ್ತು ಅವನ ಮನಸ್ಸುಗಳವರೆಗೆ ವ್ಯಾಪಿಸಿದೆ. ಈ ಕೃತಿಯಲ್ಲಿ ಬರುವ 'ಕೆಸರೂರು' ಎಂಬ ಗ್ರಾಮ ಭಾರತವನ್ನು ಪ್ರತಿನಿಧೀಕರಿಸಿರುವುದು ಮಾತ್ರವಲ್ಲದೇ ಆ ಮೂಲಕ ಹಲವು ಜ್ವಲಂತ ಸಮಸ್ಯೆಗಳನ್ನು, ಸಂಘರ್ಷವನ್ನು ಅನಾವರಣಗೊಳಿಸುತ್ತದೆ. ಇಲ್ಲಿ ಬರುವ ಧಾರ್ಮಿಕ, ಶೈಕ್ಷಣಿಕ, ರಾಜಕೀಯ, ಕೌಟುಂಬಿಕ ಸಂಸ್ಥೆಗಳೆಲ್ಲವೂ ಹಾಳಾಗಿ ವಿಕೃತರೂಪ ಪಡೆದು ಇಡೀ ಪರಿಸರ ಕಲುಷಿತಗೊಳ್ಳಲು ಕಾರಣವಾಗಿರುವುದನ್ನು ನೋಡಬಹುದಾಗಿದೆ.

ಇಲ್ಲಿ ಧಾರ್ಮಿಕ ಸಂಸ್ಥೆಗಳು ಹಿಂದೂ ಮುಸ್ಲಿಂ ಮೂಲಭೂತವಾದಿಗಳಿಂದ ತುಂಬಿದ್ದು, ತಮ್ಮ ಪ್ರತಿಷ್ಠೆಯನ್ನು ಮೆರೆಯಲು ಆಡಂಬರದ ಪೂಜೆ-ಪುನಸ್ಕಾರಗಳನ್ನು ಮಾಡುತ್ತ ಶಾಂತ ವಾತಾವರಣವನ್ನು ಹಾಳು ಮಾಡುತ್ತಾರೆ. ಇಲ್ಲಿಯ ದೇವರುಗಳು ಬೀದಿಗೆ ಬಂದು ಕಚ್ಚಾಡ ತೊಡಗುತ್ತವೆ. ಇದಕ್ಕೆ ಹಣವಂತರ, ರಾಜಕಾರಣಿಗಳ ಪ್ರೋತ್ಸಾಹ ಸಿಕ್ಕಿ ಅನೇಕ ಗಲಭೆಗಳಿಗೆ ಕಾರಣವಾಗಿ ಕಲುಷಿತ ವಾತಾವರಣವೊಂದು ನಿರ್ಮಾಣಗೊಳ್ಳುತ್ತದೆ. ಇದು ಕೇವಲ ಧರ್ಮ-ಧರ್ಮಗಳಿಗೆ ಮಾತ್ರ ಸೀಮಿತವಾದುದಲ್ಲ. ಒಂದು ಧರ್ಮದ ಒಳಗಿನ ಅನೇಕ ಜಾತಿಗಳಲ್ಲಿ ಈ ತೆರನಾದ ಸಂಘರ್ಷವೇರ್ಪಡುತ್ತದೆ. ಇಲ್ಲಿ ಇನ್ನೊಂದು ಕುತೂಹಲಕಾರಿ ಸಂಗತಿಯಿದೆ. ಅದೆಂದರೆ ಜ್ಞಾನದ ಪ್ರಸಾರಕ್ಕೆ ಕಾರಣವಾಗಬೇಕಿದ್ದ ಶಿಕ್ಷಣ ಸಂಸ್ಥೆಗಳೇ ಇಲ್ಲಿ ಧಾರ್ಮಿಕ ಸಂಸ್ಥೆಗಳಾಗಿ ಮಾರ್ಪಡುವುದು. ಇಲ್ಲಿನ ಸಂಶೋಧನಾ ಸಂಸ್ಥೆಯ ವಿಜ್ಞಾನಿಗಳು ಅಜ್ಞಾನಿಗಳಾಗಿ, ಅಂಧರಾಗಿ ಕೋಮುವಾದಿ ಶಕ್ತಿಗಳಾಗಿ ರೂಪುಗೊಳ್ಳುತ್ತಾರೆ. ಇದಕ್ಕೆ ಸ್ಥಳೀಯ ಪ್ರಭಾವಿ ವ್ಯಕ್ತಿಗಳಿಂದ ಬೆಂಬಲ ದೊರಕಿ ಬೃಹದಾಕಾರವಾಗಿ ಬೆಳೆಯುತ್ತಲೇ ಹೋಗುತ್ತದೆ. ಒಂದೆಡೆ ಸುಲೇಮಾನ್ ಬೇರಿಯಂತಹವರಾದರೆ, ಇನ್ನೊಂದೆಡೆ ಕೃಷ್ಣೇಗೌಡ, ರಾಮಾಚಾರಿಯಂತಹ ಊರಿನ ಮುಖಂಡರು ಪರಸ್ಪರ ಸಂಘರ್ಷಕ್ಕಿಳಿಯುತ್ತಾರೆ.

ಇಲ್ಲಿನ ಸ್ಥಳೀಯ ರಾಜಕೀಯಕ್ಕೆ ಸರ್ಕಾರದ ಬೆಂಬಲವೂ ದೊರಕುತ್ತದೆ. ಸುಲೇಮಾನ್ ಬೇರಿಯಂತಹವರಿಂದ ಹಣ ಪಡೆದು ಪರವಾನಗಿ ಕೊಡುವ ಸರ್ಕಾರ ವನಸಂಪತ್ತಿನ ಲೂಟಿಗೆ ನೇರವಾಗಿ ತನ್ನ ಸಹಾಯಹಸ್ತವನ್ನು ನೀಡುತ್ತದೆ. ಈ ಭ್ರಷ್ಟಾಚಾರದಿಂದಾಗಿ ಅಲ್ಲಿನ ಅಮೂಲ್ಯ ವನಸಂಪತ್ತೆಲ್ಲವೂ ಬರಿದಾಗುತ್ತಿರುತ್ತದೆ. ಇವೆಲ್ಲದರ ಮಧ್ಯೆ ಆಧುನಿಕತೆಯೂ ನುಸುಳಿ ಪಾಶ್ಚಿಮಾತ್ಯರನ್ನು ತಮ್ಮ ಪ್ರತಿಯೊಂದು ಕಾರ್ಯದಲ್ಲೂ ಅನುಕರಿಸುವ ಒಂದು ವರ್ಗವನ್ನು ಸೃಷ್ಟಿ ಮಾಡಿಕೊಳ್ಳುತ್ತಿರುತ್ತದೆ. ಹಾಗೆಯೇ ಇಲ್ಲಿನ ಕೌಟುಂಬಿಕ ಸಂಸ್ಥೆಯೊಂದು ಅನೇಕ ಚಿತ್ತವಿಕಾರಗಳಿಂದ ಬಳಲುವುದನ್ನು ನೋಡಬಹುದಾಗಿದೆ. ಒಟ್ಟಿನಲ್ಲಿ ಕೆಸರೂರಿನ ಏಲಕ್ಕಿಗೆ ಕೆಸರೂರಿನ ಸಂಸ್ಕೃತಿಗೆ ಒಟ್ಟಿಗೆ ರೋಗ ತಗುಲಿಕೊಂಡಿದೆ. ಏಲಕ್ಕಿ ಬೆಳೆಗೆ ಅಂಟಿಕೊಂಡಿರುವ ವೈರಸ್ ಇಡೀ ಬೆಳೆಗೆ ಹರಡುವಂತೆಯೇ ಕೆಸರೂರಿನಲ್ಲಿನ ಸಮಸ್ಯೆಗಳು ಒಂದಕ್ಕೊಂದು ತಳುಕು ಹಾಕಿಕೊಂಡು ಇಡೀ ಪರಿಸರವನ್ನೇ ನಾಶಪಡಿಸುತ್ತದೆ.

ಈ ರೀತಿ ಪ್ರತಿಯೊಂದು ಕ್ಷೇತ್ರಗಳಲ್ಲಿ ವೈರಸ್ ಹೀಗೆ ಹರಡುತ್ತಿರುವುದರಿಂದಲೋ ಏನೋ ರಾಮಚಂದ್ರನ ಮಾತಿನಲ್ಲಿ ಸತ್ಯಾಂಶವೊಂದು ಕಂಡುಬರುತ್ತದೆ. "ಈ ಜಿಲ್ಲೆಗೆ ಏನಯ್ಯಾ ಶಾಪ? ಇಷ್ಟೊಂದು ಸುಂದರವಾಗಿದೆ. ಕಾಡುಗಳಿದ್ದಾವೆ, ಮಳೆ ಇದೆ, ಬೆಳೆ ಇದೆ, ತಣ್ಣನೆ ಜೀವನೋಪಾಯ ಸಾಗಿಸ್ತಾರೆ. ಆದರೆ ಯಾವುದೋ ಒಂದು ಭಯಾನಕ ಕೊರತೆ ಇದೆ ಇಲ್ಲಿ ಹೆಗ್ಡೆ. ಹೊರಗಿನಿಂದ ಬಂದು

ಬದುಕು ಆರಂಭಿಸಿದೊಡನೆ ಅದು ಅನುಭವಕ್ಕೆ ಬರ್ತದೆ"[13] ಈ ಮಾತಿನಲ್ಲಿ ಕೆಸರೂರಿನ ವೈರಸ್ ಸೋಂಕಿನ ಚಿತ್ರಣವನ್ನು ಕಾಣಬಹುದಾಗಿದೆ. "ಏಲಕ್ಕಿಗೆ ಹತ್ತಿದ ಹುಳುಗಳನ್ನು ಹುಡುಕಿ ತೆಗೆಯಲು ಹೋದಾಗ ಕೆಸರೂರಿನ ಆರೋಗ್ಯವನ್ನು ಕೆಡಿಸುವ ಸುಲೇಮಾನ್ ಬೇರಿ, ಆಚಾರಿ, ಪ್ರಾಚಾರ್ಯ, ಕೃಷ್ಣೇಗೌಡ ಈ ಮುಂತಾದ ಕೊರೆಯುವ ಕೀಟಗಳ ಗೋಪ್ಯಗಳು ಬಯಲಾಗಿ ಕಾದಂಬರಿ ಹೊಸ ಆಯಾಮ ಪಡೆಯುತ್ತದೆ."[13a]

ಈ ಎಲ್ಲಾ ಸಂದಿಗ್ಧತೆಯ ನಡುವೆಯು ರೋಗಪೀಡಿತವಾದಂತ ಈ ಸಮಾಜದಿಂದ ಹೊರಬಂದು ಆರೋಗ್ಯಕರವಾದ ಬದುಕನ್ನು ಕಟ್ಟಿಕೊಳ್ಳಲು ಹಂಬಲಿಸುವ, ಪ್ರಯತ್ನಿಸುವ ಮನಸ್ಸುಗಳನ್ನು ಕೃತಿಯಲ್ಲಿ ಗುರುತಿಸಬಹುದಾಗಿದೆ. ಅಧ್ಯಾಪಕರು ಹೊತ್ತಿಸಿದ ಕಿಚ್ಚಿನಿಂದಾಗಿ ನಾಲ್ಕೈದು ಜನ ಹುಡುಗರು ಕ್ರಾಂತಿ ಮಾಡುತ್ತೇವೆಂದು ಹೊರಟಾಗ ಎಷ್ಟರಮಟ್ಟಿಗೆ ತಮ್ಮ ಉದ್ದೇಶವನ್ನು ಈಡೇರಿಸಲೇಬೇಕೆಂಬ ಛಲ ಅವರಲ್ಲಿತ್ತೋ ಗುರುತಿಸುವುದು ಕಷ್ಟ ಆದರೆ ಅವರ ಮನಸ್ಸುಗಳು ಯಾವುದೋ ಒಂದು ಬದಲಾವಣೆಗಾಗಿ ತುಡಿಯುವುದನ್ನು ತಿರಸ್ಕರಿಸಲಾಗದು, ತಮ್ಮಲ್ಲಿ ಸ್ಪಷ್ಟ ಅರಿವು ಇಲ್ಲದೆಯೇ ಸಾಮಾಜಿಕ ಬದಲಾವಣೆಗೆ ಅವರು ಕಾರಣರಾಗುತ್ತಿರುತ್ತಾರೆ. ಅಂದರೆ ಸಮಾಜದ ಈ ಅವ್ಯವಸ್ಥೆಯನ್ನು ಸರಿಪಡಿಸಲು, ಅಲ್ಲಿ ದಟ್ಟವಾಗಿ ಬೆಳೆದಿರುವ ಕಳೆಯನ್ನು ಕಿತ್ತೊಗೆಯಲು ಈ ರೀತಿಯ ಯುವ ಮನಸ್ಸುಗಳಿಂದ ಮಾತ್ರ ಸಾಧ್ಯ ಎಂಬ ದನಿಯೂ ಇಲ್ಲಿದೆ. ಇಡೀ ಕೆಸರೂರೇ ಬೆಂಕಿಯಲ್ಲಿ ಮುಳುಗಿ ಹೋಗಿರುವಾಗ ರಫಿ ಮತ್ತು ಜಯಂತಿ ಪಾರಾಗಿ ಕಲ್ಲುಗುಡ್ಡದ ಮೇಲೆ ಹೋಗುವುದು, ಕೃತಿಯಲ್ಲಿ ಒಂದು ಆಶಾಭಾವನೆಯನ್ನು ಸಹ ಮೂಡಿಸುತ್ತದೆ. ಈ ಎಲ್ಲಾ ವಿವರಗಳ ಮೂಲಕ ಭಾರತದ ಪರಿಸರದ ಒಂದು ಚಿತ್ರಣವನ್ನು ತೇಜಸ್ವಿ ನೀಡುತ್ತಾರೆ.

ತೇಜಸ್ವಿಯವರಲ್ಲಿದ್ದಂತಹ ವೈಚಾರಿಕ ದೃಷ್ಟಿಕೋನ ಅವರನ್ನು ಹಲವು ಸಂದಿಗ್ಧ ಪರಿಸ್ಥಿತಿಯಿಂದ ಪಾರು ಮಾಡಿರುವುದನ್ನು ನೋಡಬಹುದಾಗಿದೆ. ಪರಿಸರದ ಕತೆಗಳಲ್ಲಿ ಬರುವ 'ಸಂಬಳಕ್ಕೆ ಸಿಕ್ಕಿಕೊಂಡ ದೆವ್ವ', 'ಕುಕ್ಕಟ ಪಿಶಾಚ', 'ಗಾಡ್ಲಿ' ಕೆಲವೊಂದು ಉದಾಹರಣೆಗಳಾಗಿ ನೋಡಬಹುದು. ತೇಜಸ್ವಿಯವರ ಬಗ್ಗೆ ಅವರ ಸ್ನೇಹಿತ ಶ್ರೀರಾಮ ಹೇಳುವ ಮಾತುಗಳು ಈ ರೀತಿ ಇದೆ. "ತೇಜಸ್ವಿ ಬಾಲ್ಯದಿಂದಲೇ ಸಾಂಪ್ರದಾಯಿಕ ಕಲಿಕೆಯನ್ನು ಮೀರಿ ಬೆಳೆದರು. ಬದುಕಿನ ಸಂಬಂಧಗಳಲ್ಲಿರುವ ಸಂಕೀರ್ಣತೆ, ಪ್ರಕೃತಿ ಪರಿಸರದಲ್ಲಿರುವ ನಿಗೂಢತೆ ಅವರನ್ನು ಗಾಢವಾಗಿ ಸೆಳೆದ ಕಾರಣ ಶೋಧ ಅವರ ಸಮಸ್ತ ಕೃತಿರಚನೆಯ ಮುಖ್ಯ ಕಾಳಜಿಯಾಯಿತು. ಅದು ಅವರ ಸೃಜನ–ಸೃಜನೇತರ ಕೃತಿಗಳ ಮುಖ್ಯನೆಲೆಯಾಗಿ ನಿಂತಿರುವ ಕಾರಣದಿಂದಲೇ ಕನ್ನಡ ಓದುಗರಿಗೆ ಅಪಾರ ವಸ್ತು ವೈವಿಧ್ಯ ಅನುಭವಗಳು ದೊರಕುವಂತಾಯಿತು. ಅವರಲ್ಲೊಬ್ಬ ತೀಕ್ಷ್ಣಮತಿ ಕಾರಂತರಿದ್ದರು; ಸದಾ ಬೆರಗುಗಣ್ಣಿನಿಂದ ಜಗತ್ತನ್ನು ನೋಡುವ ಮಲೆನಾಡ ಹಳ್ಳಿಯ ಹೈದನಿದ್ದ; ಹಾಗೆಯೇ ಪ್ರತಿಯೊಂದನ್ನು

ಪ್ರಶ್ನಾರ್ಥಕವಾಗಿ ನೋಡುವ, ಪರೀಕ್ಷಿಸುವ ಲೋಹಿಯಾ ಇದ್ದರು. ಈ ಕಾರಣದಿಂದಲೇ ತೇಜಸ್ವಿ ಸಿದ್ಧಾಂತಿಯಂತೆಯೂ, ಅಲೆಮಾರಿಯಂತೆಯೂ, ಕೆಲಸಕ್ಕೆ ಬಾರದ ಹಳ್ಳಿಯ ಹೈದನಂತೆಯೂ, ಒಮ್ಮೊಮ್ಮೆ ಸಂತನಂತೆಯೂ ಕಾಣುತ್ತಿದ್ದರು. ಈ ಕಾರಣದಿಂದಲೇ ಅವರು ಮತ ಧರ್ಮ ಜಾತಿ ಬಂಧನಗಳಾಚೆ ಸಿಡಿದು ನಿಂತ ನಿಜವಾದ ಮನುಷ್ಯರಾಗಿದ್ದರು. ಓತಿಕ್ಯಾತ, ಮಂದಣ್ಣ, ಕರ್ವಾಲೋ, ಎಂಕ್ಟರಂಥ ಮನುಷ್ಯರಂತೆಯೂ, ನೀರಿನಲ್ಲಿ ಹರಿದಾಡಿ ಜೀವಿಸುವ ಮೀನು ಕಪ್ಪೆ ಏಡಿಗಳಂತೆಯೂ, ಮಗದೊಮ್ಮೆ ಮರಗಿಡಬಳ್ಳಿಯಂತೆಯೂ ಪ್ರಕೃತಿಯಂತಾಗುತ್ತಿದ್ದರು"[14]

ತೇಜಸ್ವಿ ತಮ್ಮ ಕತೆಗಳಲ್ಲಿ ಕೇವಲ ಒಬ್ಬ ನಿರೂಪಕನಾಗಿ ಮಾತ್ರ ಉಳಿಯದೆ ಒಂದು ಆಕರ್ಷಕ ಪಾತ್ರವಾಗಿಯೂ ಬರುವುದರಿಂದ ಕತೆ ಇನ್ನಷ್ಟು ಪ್ರಭಾವಕಾರಿಯಾಗಿ ಮೂಡುವುದನ್ನು ನೋಡಬಹುದಾಗಿದೆ. ಇಲ್ಲಿ ಕತೆಗಳ ವಿಷಯ, ವಸ್ತು ನೈಜತೆಗೆ ಹತ್ತಿರವಿರುವುದರಿಂದ ಹಾಗೂ ಅನುಭವದ ಮೂಲಕ ಹೊರಬಂದಿರುವುದರಿಂದ ಓದುಗರಲ್ಲಿ ಒಂದು ಅರಿವು ಮೂಡಿಸಲು ನೆರವಾಗಿದೆ. ತೇಜಸ್ವಿಯವರು ಮಾನವನ ದುರ್ವತನೆಯಿಂದ ಛಿದ್ರಗೊಳ್ಳುತ್ತಿರುವ ಪರಿಸರವನ್ನು ಹಲವು ನಿದರ್ಶನಗಳ ಮೂಲಕ ತಿಳಿಸುತ್ತಲೇ, ಅದರ ಪುನಶ್ಚೇತನ ಕಾರ್ಯವನ್ನು ಕೈಗೊಳ್ಳಬೇಕಾದ ಅನಿವಾರ್ಯತೆಯನ್ನು ಕೂಡ ತಿಳಿಸುತ್ತಾರೆ.

## ಅಡಿ ಟಿಪ್ಪಣಿಗಳು

1. ಪರಿಸರದ ಕತೆ, ತೇಜಸ್ವಿ, ಪುಸ್ತಕ ಪ್ರಕಾಶನ, ಪುಟ ಸಂಖ್ಯೆ – 2
2. ಹೆಜ್ಜೆ ಮೂಡದ ಹಾದಿ, ತೇಜಸ್ವಿ; ಪುಸ್ತಕ ಪ್ರಕಾಶನ, ಪುಟ ಸಂಖ್ಯೆ–61
3. ಅದೇ, ಪುಟ 64
4. ಪರಿಸರದ ಕತೆ, ತೇಜಸ್ವಿ; ಪುಸ್ತಕ ಪ್ರಕಾಶನ, ಪುಟ ಸಂಖ್ಯೆ – 2
5. ಅದೇ, ಪುಟ – 2
6. ಅದೇ, ಪುಟ – 38
7. ತಿಂಗಳು (ಮಾಸ ಪತ್ರಿಕೆ) ಲೇಖಕ; ಎಸ್.ನಟರಾಜ್ ಬೂದಾಳು, ಪುಟ ಸಂಖ್ಯೆ–41
8. ಹೆಜ್ಜೆ ಮೂಡದ ಹಾದಿ, ತೇಜಸ್ವಿ, ಪುಸ್ತಕ ಪ್ರಕಾಶನ, ಪುಟ ಸಂಖ್ಯೆ–61
9. ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು, ತೇಜಸ್ವಿ, ಪುಸ್ತಕ ಪ್ರಕಾಶನ, ಪುಟಸಂಖ್ಯೆ – 19
10. ಅದೇ, ಪುಟ –6
11. ಅದೇ, ಪುಟ –56
12. ಅಬಚೂರಿನ ಪೋಸ್ಟಾಫೀಸು (ಕಥಾಸಂಕಲನ), ತೇಜಸ್ವಿ, ಪುಸ್ತಕ ಪ್ರಕಾಶನ, ಪುಟಸಂಖ್ಯೆ–38
13. ಚಿದಂಬರ ರಹಸ್ಯ, ತೇಜಸ್ವಿ, ಸುವರ್ಣ ಸಾಹಿತ್ಯ ಗ್ರಂಥಮಾಲೆ, ಪುಟಸಂಖ್ಯೆ–42

13a. ಸಾಹಿತ್ಯ ಸಂಗತಿ, ಡಾ. ಬಸವರಾಜ ಸಬರದ, ಪಲ್ಲವಿ ಪ್ರಕಾಶನ, ಪುಟಸಂಖ್ಯೆ –164.

14. ತಿಂಗಳು(ಮಾಸಪತ್ರಿಕೆ), ಲೇಖಕ: ಶ್ರೀರಾಮ್, ಪುಟಸಂಖ್ಯೆ – 38

# ಅಧ್ಯಾಯ – 4

## ಬಿ.ಜಿ.ಎಲ್.ಸ್ವಾಮಿಯವರ 'ಹಸುರು ಹೊನ್ನು' ಕೃತಿಯಲ್ಲಿ ಪರಿಸರದ ಸ್ವರೂಪ

ಬಿ.ಜಿ.ಎಲ್.ಸ್ವಾಮಿಯವರ ಪರಿಸರದ ಕುರಿತಾದ ಚಿಂತನೆಗಳನ್ನು ಗುರುತಿಸುವಾಗ ತೇಜಸ್ವಿಯವರ ಗ್ರಹಿಕೆ ಮತ್ತು ಹುಡುಕಾಟದ ನೆಲೆಗಳಿಗಿಂತ ಭಿನ್ನವಾಗಿದೆ. ಆದರೆ ಪರಿಸರದ ಅನಾರೋಗ್ಯಕ್ಕೆ ಕಾರಣವಾಗಿರುವ ಮನುಷ್ಯನ ವರ್ತನೆಗಳ ಬಗೆಗೆ ಕೋಪ, ಅಸಮಾಧಾನಗಳು ಇವರಲ್ಲಿಯೂ ಇವೆ. ಬಿ.ಜಿ.ಎಲ್. ಸ್ವಾಮಿಯವರು ಸಸ್ಯಶಾಸ್ತ್ರದ ಪ್ರಾಧ್ಯಾಪಕರಾಗಿ ವಿದ್ಯಾರ್ಥಿಗಳೊಂದಿಗೆ ಅಧ್ಯಯನದ ದೃಷ್ಟಿಯಿಂದ ಪ್ರವಾಸಕೈಗೊಂಡ ಸಂದರ್ಭದಲ್ಲಿ ಜರಗುವ ಹಲವು ಘಟನೆಗಳಿಗೆ ಮುಖಾಮುಖಿಯಾದಾಗಿನ ಅವರ ಆಲೋಚನೆಗಳು ನಮಗಿಲ್ಲಿ ಮುಖ್ಯವಾಗುತ್ತದೆ. ಸಸ್ಯಶಾಸ್ತ್ರೀಯ ದೃಷ್ಟಿಯಿಂದ ಮುಖ್ಯವಾಗುವ ಮರಗಿಡಗಳ ಬಗೆಗೆ, ಅವುಗಳ ವೈವಿಧ್ಯತೆ, ಪ್ರಾಮುಖ್ಯತೆ, ರಚನಾ ವಿನ್ಯಾಸಗಳನ್ನು ವಿವರಿಸುತ್ತಾ ಮಾನವ ಇವುಗಳ ಮೇಲೆ ಸಾಧಿಸಲೆಳೆಸುವ ಅಧಿಕಾರವು ಲಾಭಕಾಂಕ್ಷೆ, ಸ್ವಾರ್ಥ ಮೂಲದ ಆಕ್ರಮಣಕಾರಿ ನೀತಿಯೂ ಅವುಗಳ ನಾಶಕ್ಕೆ ಕಾರಣವಾಗಿರುವ ಬಗೆಯನ್ನು ತನ್ನನ್ನೇ ಕೇಂದ್ರವಾಗಿಸಿಕೊಂಡು ಪರಿಸರದ ಪ್ರತಿಯೊಂದು ಅಂಶವನ್ನು ತನ್ನ ಅನುಭೋಗಕ್ಕೆ ತಕ್ಕಂತೆ ಬಳಸಿಕೊಳ್ಳುವ ಹುನ್ನಾರಗಳನ್ನು ಜಡ್ಡುಗಟ್ಟಿ ಹೋಗಿರುವ ಇಂದಿನ ಶಿಕ್ಷಣ ವ್ಯವಸ್ಥೆ ಮತ್ತು ರೋಗಗ್ರಸ್ತರಾಗಿ ಹೊಸದಾಗಿ ಏನನ್ನೂ ಸೃಷ್ಟಿಸಲಾಗದೇ, ಆಲೋಚಿಸಲೂ ಆಗದೆ, ಕ್ರಿಯಾಶೀಲ ಮನಸ್ಸನ್ನು ಇಲ್ಲವಾಗಿಸುವ ಅಧಿಕಾರಿಗಳಿಂದ ಕೂಡಿರುವ ವ್ಯವಸ್ಥೆಯನ್ನು ಅಸಮರ್ಪಕ ಸರ್ಕಾರದ ನೀತಿ ನಿಯಮಗಳನ್ನು ವಿವರಿಸುತ್ತಾ, ಪ್ರಶ್ನಿಸುತ್ತಾ ಮುಂದುವರೆಯುವುದನ್ನು ನೋಡಬಹುದಾಗಿದೆ.

ಈ ನಿಟ್ಟಿನಲ್ಲೇ ಚಂದ್ರಶೇಖರ್ ನಂಗಲಿಯವರು 'ಹಸುರುಹೊನ್ನು' ಕೃತಿಯ ಆಂತರಿಕ ಸ್ವರೂಪದರ್ಶನವನ್ನು ಕಂಡುಕೊಂಡಿರುವ ಬಗೆಯು ಮುಖ್ಯವಾಗುತ್ತದೆ. "ತನ್ನ ಒಡಲೊಳಗೆ ಸಮೃದ್ಧವೂ ವೈವಿಧ್ಯಮಯವೂ ಆದ ಉಪಾಖ್ಯಾನಗಳೆಂಬ ಕಥಾ ಸರಿತ್ಸಾಗರವನ್ನೇ ಹೊಂದಿರುವ 'ಹಸುರುಹೊನ್ನು' ಪ್ರತಿಭೆ – ವ್ಯುತ್ಪತ್ತಿ – ಅಭ್ಯಾಸಗಳ ತ್ರಿವೇಣಿ ಸಂಗಮವಾಗಿ ಕಾಣುತ್ತದೆ. ಈ ಕೃತಿಯ ಆಂತರಿಕ ಸ್ವರೂಪ ದರ್ಶನವನ್ನು ಜಾನಪದ ಮಾರ್ಗ ಮತ್ತು ಶೈಕ್ಷಣಿಕ ಮಾರ್ಗದ ಪರಿಭಾಷೆಗಳನ್ನು ಬಳಸಿಕೊಂಡು 'ಜಡೆಕೋಲಾಟದ ಬಂಧ' ಮತ್ತು 'ಅಂತರ್‌ಶಿಸ್ತೀಯ ಅಧ್ಯಯನ'ಗಳೆಂಬ ಮಾತುಗಳಿಂದ ಕೊಂಚ ಮಟ್ಟಿಗೆ ನಿರ್ದೇಶಿಸಬಹುದು. 'ಹಸುರು ಹೊನ್ನು' ಕೃತಿಯ ಕಥನ ಕ್ರಮವು ಜಾನಪದ ಮಾರ್ಗದ ಜಡೆಕೋಲಾಟವನ್ನು ಹೋಲುವಂತಹದ್ದು! ತನ್ನ ಪಾಡಿಗೆ ತಾನು ಕೋಲಾಟ ಮಾಡುವ ತಂಡವೊಂದು ರಂಗದ ಮೇಲೆ ಜಡೆಗಳ ಹೆಣೆಗೆಯೊಂದನ್ನು ಸಾಧಿಸಿಬಿಡುವಂತೆ

'ಹಸುರುಹೊನ್ನು' ಕೃತಿಯ ಕಥನಕ್ರಮವು ಬಹುರೂಪಿಯಾಗಿ ಮೂಡಿಬಂದಿದೆ. ಹೀಗೆ ಬಹುರೂಪಿಯಾಗಿರುವ 'ಹಸುರುಹೊನ್ನು' ಕೃತಿಯ ವಿಚಾರಸರಣಿಯೂ ಅಂತರ್‌ಶಿಸ್ತೀಯ ಅಧ್ಯಯನದ ಪರಿಣಾಮ ಫಲವಾಗಿದೆ. ಇಂತಹದೊಂದು ಕೃತಿಯನ್ನು ಎದುರುಗೊಳ್ಳುವ ಸಾಹಿತ್ಯವಿಮರ್ಶಕರು – ಸಂಶೋಧಕರಿಗೆ ಕೂಡಾ ತನ್ನದೇ ಆದ ಪೂರ್ವಸಿದ್ಧತೆಗಳಿರುವುದು ಅವಶ್ಯವಾಗಿದೆ"[1] ಎಂಬ ಮಾತು ಈ ಕೃತಿಯ ಮೌಲ್ಯವನ್ನು, ಪ್ರಾಮುಖ್ಯತೆಯನ್ನು ನಮ್ಮ ಮುಂದಿರಿಸುತ್ತದೆ.

ಸಸ್ಯಗಳ ಅಧ್ಯಯನದ ದೃಷ್ಟಿಯಿಂದ ಹೊರಟಾಗಲೂ ಸಹ ಬಿ.ಜಿ.ಎಲ್.ಸ್ವಾಮಿಯವರ ಕಲಾವಿದನ ಮನಸ್ಸು ಸದಾ ಜಾಗೃತವಾಗಿರುತ್ತದೆ. ಅದು ಪ್ರಕೃತಿಯ ಸೊಬಗನ್ನು, ಸೌಂದರ್ಯವನ್ನು ಆಸ್ವಾದಿಸುತ್ತದೆ. ಸೃಷ್ಟಿ ವೈಚಿತ್ರ್ಯವನ್ನು ಕಂಡು ಬೆರಗುಗೊಳ್ಳುತ್ತದೆ. ಎಲ್ಲವನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿ ಉಪಯೋಗವನ್ನು ಕುರಿತು ಚಿಂತಿಸುವ ಮನಸ್ಸು ಇಲ್ಲಿಲ್ಲ. 'ನೀಟಮ್' ಎಂಬ ಸಸ್ಯದ ಎಲ್ಲಾ ತೆರನಾದ ಉಪಯೋಗವನ್ನು ಹೇಳುತ್ತ ಸ್ವಾಮಿಯವರು "ನನಗೆ ಈ ತೆರನಾದ ಐಹಿಕ ಉಪಯೋಗಗಳಲ್ಲಿ ಅಷ್ಟು ಕುತೂಹಲವಿಲ್ಲ. ಕಾಂಡದ ರಚನಾಚಾತುರ್ಯಕ್ಕೆ ಮಾರುಹೋಗಿದ್ದೇನೆ. ಎಷ್ಟು ಚೆಲುವಾದ ನಕಾಶೆಗಳು! ದೊಡ್ಡದೊಂದು ಕಾಂಡವನ್ನು ಅಡ್ಡವಾಗಿ ಕಡಿದು ತೋಪಡವಿಟ್ಟು ನೋಡಿ ಆಗ ಗೊತ್ತಾಗುತ್ತದೆ. ಸೃಷ್ಟಿವೈಚಿತ್ರ್ಯ"[2] ಎಂದು ಅದರ ಸೌಂದರ್ಯಕ್ಕೆ, ರಚನಾಕ್ರಮಕ್ಕೆ ಸೋತುಹೋಗುತ್ತಾರೆ. ಇಂತಹದ್ದನ್ನು ನೇಯ್ಗೆ ಕೈಗಾರಿಕೆಯವರೂ, ಕುಶಲಕಲೆಗಾರರೂ ಅಸಂಖ್ಯಾತ ಹೆಣಿಗೆ ನಮೂನೆಗಳಿಗೆ ಮಾದರಿಯಾಗಿರಿಸಿಕೊಳ್ಳಬಹುದು ಎಂದು ಅಭಿಪ್ರಾಯಪಡುತ್ತಾರೆ. ಅಧ್ಯಯನದ ಜೊತೆಗೆ ಪ್ರಕೃತಿಯ ಸೊಬಗನ್ನು ಸವಿಯುತ್ತಾರೆ, ಮಣಿಯುತ್ತಾರೆ, ಆಶ್ಚರ್ಯಗೊಳ್ಳುತ್ತಾರೆ. ಆಗುಂಬೆಯ ಸೂರ್ಯಾಸ್ತಮಯ ಘಳಿಗೆಯನ್ನು ವರ್ಣಿಸುತ್ತ "ಆ ಮಹತೋಮಹಿಯ ವಿಶಾಲತೆಯಲ್ಲಿ ನಾವು ಅಣೋರಣೀಯ ಚುಕ್ಕೆಗಳು ಎಂಬ ಭಾವನೆ ಮೂಡುತ್ತದೆ. ನಿಸರ್ಗದ ವಿಶಾಲತೆಯಲ್ಲಿ ನಾವೆಷ್ಟು ಮಾತ್ರದವರು ಎಂಬ ಒಂದು ನಿರಾಶೆಯುಂಟಾಗುತ್ತದೆ"[3] ಎಂದು ಆ ಸೃಷ್ಟಿಯ ಸೊಬಗಿಗೆ, ಅಗಾಧತೆಗೆ ಶರಣಾಗುತ್ತಾರೆ. ಮರಕತಮಯ ಸಿಂಗರ ಭಾಗದಲ್ಲೂ ಸಹ ಸರ್ವೆ ಆಗಿಲ್ಲದ ಕಾಡನ್ನು ಹೊಕ್ಕು ಅವಿಸ್ಮರಣೀಯ ಅನುಭವವನ್ನು ತಮ್ಮದಾಗಿಸಿಕೊಳ್ಳುತ್ತಾರೆ. ಸೃಷ್ಟಿಯ ವೈಚಿತ್ರ್ಯ, ವೈಭವ ದರ್ಶನವನ್ನು ಪಡೆಯುತ್ತಾ ವರ್ಣಿಸುವ ಕ್ರಮ ಹೀಗಿದೆ: "ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ. ಸಮ್ಮೋಹನಾಸ್ತ್ರದಿಂದ ಪೆಟ್ಟು ಬಿದ್ದವರಂತೆ ಜಗತ್ ಶಿಲ್ಪಿಯ ಕಲಾ ಸೃಷ್ಟಿಯಲ್ಲಿ ಕಲೆತವು"[4] ಎಂದು ಅನುಭವಗಳನ್ನು ವಿವರಿಸುವ ಸ್ವಾಮಿ ಅದೇ ಅಧ್ಯಾಯದ 'ನವರತ್ನಕಾಂತಿಯ ಲಡ್ಡು' ಎಂಬ ಭಾಗದಲ್ಲಿ ಹೇಳುವ ಸೃಷ್ಟಿಯ ವೈಚಿತ್ರ್ಯ, ಸೊಬಗುಗಳು ಹೇಗೆ ಮನುಷ್ಯನ ಕೈಗೆ ಎಟುಕದವುಗಳಾಗಿವೆ ಎಂಬುದನ್ನು ತಿಳಿಸುತ್ತಾರೆ. ಇಲ್ಲಿ ಅಪರೂಪದ ಒಂದು ಬಗೆಯ ಅಣಬೆಗಳು ಕೊಳಕು ಮರದ ದಿಮ್ಮಿಯ ಕತ್ತಲಲ್ಲಿ

ಬಣ್ಣಬಣ್ಣಗಳ ಸ್ವಯಂಪ್ರಕಾಶವನ್ನು ಚೆಲ್ಲುತ್ತಾ ಆಕರ್ಷಿಸುವ ಸಮಯದಲ್ಲಿ ಈ ಅಣಬೆಗಳ ಬಗೆಗೆ ಅರಿವಿದ್ದ ಸ್ವಾಮಿ ನೀಡುವ ವಿವರಣೆ ಸೃಷ್ಟಿಯ ವೈಚಿತ್ರ್ಯ ನಿಗೂಢತೆಯನ್ನು ತಿಳಿಸುತ್ತದೆ. "ಬೆಳೆಯುತ್ತಿರುವ ಜಾಗದಿಂದ ಇವನ್ನು ಬೇರ್ಪಡಿಸಿದರೆ ಇದರ ಸೊಬಗು ಮಾಯವಾಗಿಬಿಡುತ್ತದೆ. ಬೇರೆಡೆಗೆ ತೆಗೆದುಕೊಂಡು ಹೋಗಿ ಬೆಳೆಸುವಂತೆಯೂ ಇಲ್ಲ. ಲ್ಯಾಬೋರೇಟರಿಗೆ ತೆಗೆದುಕೊಂಡು ಬಂದರೆ ಒಣಗಿಸಿಯೂ, ದ್ರಾವಕದಲ್ಲಿಟ್ಟ ರವಾನಿಸಬೇಕು. ಹಾಗೆ ಮಾಡಿದರೂ ಸೊಬಗನ್ನು ಹಿಡಿದು ನಿಲ್ಲಿಸಲಾಗದು. ಅಷ್ಟೇಕೆ ನಾವು ನೋಡುತ್ತಿರುವ ಪೊಟರೆಯ ಬಾಯೊಳಕ್ಕೆ ಇನ್ನಷ್ಟು ಕಾಲದಲ್ಲಿ ಬೆಳಕು ಚೆಲ್ಲಿ ಗಾಳಿಯಲ್ಲಿರುವ ಅಮ್ಲಜನಕ ಬೀಸಿ ಸೊಬಗನ್ನು ಅಸಹನೆಯಿಂದಲೋ ಏನೋ ಸೂರೆಮಾಡಿಬಿಡುತ್ತದೆ"[5] ಇಲ್ಲಿ ಅಡಗಿರುವ ರಹಸ್ಯ ವಿಜ್ಞಾನಕ್ಕೆ ಎಸೆದಿರುವ ಸವಾಲಿನಂತಿದೆ. ವೈಜ್ಞಾನಿಕವಾಗಿ ಮನುಷ್ಯ ಎಷ್ಟೇ ಮುಂದುವರೆದಿದ್ದರೂ ಇಂತಹ ಸೊಬಗನ್ನು ತನ್ನದನ್ನಾಗಿಸಿಕೊಳ್ಳಲಾರ ಎಂಬುದು ಮೇಲಿನ ವಿವರಣೆಯಿಂದ ತಿಳಿದುಬರುತ್ತದೆ. ಈ ದೃಶ್ಯವನ್ನು ಕಂಡ ಸ್ವಾಮಿ ಎಷ್ಟು ಸಂತೋಷಗೊಳ್ಳುತ್ತಾರೆಂದರೆ "ಈ ಸೊಬಗಿನ ದೃಶ್ಯವನ್ನು ಕಾಣಬೇಕಾದರೆ ಅದೆಷ್ಟು ಪುಣ್ಯ ಮಾಡಿದ್ದಿರಬೇಕೋ! ನಾನು ಕಂಡದ್ದುತೂ ಇದು ಒಂದು ಸಲ ಮಾತ್ರ. ಎಷ್ಟೋ ಕಡೆಗಳಲ್ಲಿ ಇದಕ್ಕಾಗಿಯೇ ಹುಡುಕಿ ನೋಡಿದ್ದೇನೆ. ಇದುವರೆಗೂ ಲಭಿಸಿರಲಿಲ್ಲ"[6] ಎಂದು ಉದ್ಗರಿಸುತ್ತಾರೆ.

ಇನ್ನು ಮನುಷ್ಯನ ವಿನಾಶಕಾರಿ ವರ್ತನೆಯನ್ನು ಸ್ವಾಮಿ ಹಲವೆಡೆಗಳಲ್ಲಿ ವಿರೋಧಿಸುವುದನ್ನು ಕಾಣಬಹುದು. ಮನುಷ್ಯನ ಅತಿರೇಕಕ್ಕೇರಿದ ಆಕ್ರಮಣಕಾರಿ ನೀತಿಯು ಅತ್ಯಮೂಲ್ಯವಾದಂತಹದನ್ನೆಲ್ಲ ಬರಿದಾಗಿಸಿ ಇಂತಹದೊಂದು ವಸ್ತು ಇತ್ತೇ? ಎಂಬ ಯಾವ ಕುರುಹೂ ಉಳಿಯದ ಹಾಗೆ ನಾಶ ಪಡಿಸಿರುವ ಅವನ ಗುಣ ಚರಿತ್ರೆಯಲ್ಲಿದೆ, ಅದು ನಿರಂತರವಾಗಿ ಮುಂದುವರೆಯುತ್ತಲೂ ಇದೆ. ಸ್ವಾಮಿಯವರು ವಿವರಿಸುವ 'ಸರ್ಪಗಂಧಿ' ಎಂಬ ಸಸ್ಯ ಇದಕ್ಕೊಂದು ಉತ್ತಮ ನಿದರ್ಶನವಾಗಿದೆ. 20 ವರ್ಷಗಳ ಹಿಂದೆ ಭಾರತದ ಕಾಡುಗಳಲ್ಲಿ ಹೇರಳವಾಗಿದ್ದ ಈ ಗಿಡ ಕಣ್ಮರೆಯಾದ ಇತಿಹಾಸವನ್ನು ಬಿಚ್ಚಿಡುತ್ತಾರೆ. ಜನರ ನಂಬಿಕೆಗಳ ಜೊತೆ ಬೆಳೆದು ಬಂದ ಈ ಸಸ್ಯ ಎಂದು ಸಂಶೋಧಕರು, ವಿಜ್ಞಾನಿಗಳ ಕಣ್ಣಿಗೆ ಬಿತ್ತೋ, ಅಂದೆ ಅವನತಿಯ ಹಾದಿ ಹಿಡಿಯುತ್ತಾ ಬಂದಿತು. ಜರ್ಮನ್, ಇಂಗ್ಲೆಂಡ್, ಅಮೇರಿಕಾದಲ್ಲೆಲ್ಲ ಹಲವು ಸಂಶೋಧನೆಗಳ ಮೂಲಕ ಇದರ ಪ್ರಯೋಜನವನ್ನು ಕಂಡುಹಿಡಿಯಲಾಯಿತು. "ರಕ್ತದ ಅಧಿಕ ಒತ್ತಡದಿಂದ ನರಳುವ ರೋಗಿಗಳಿಗೆ ಸರ್ಪಗಂಧಿಯನ್ನು ಕೊಟ್ಟಾಗ ಅವರ ತಲ್ಲಣಗೊಂಡ ಮನೋನಿಲೆ ಶಾಂತವಾದದ್ದನ್ನು ವೈದ್ಯರು ಕಂಡುಕೊಂಡರು. ಅಲ್ಲೋಲ್ಲ ಕಲ್ಲೋಲವಾದ ಮನಸ್ಸಿಗೆ ನೆಮ್ಮದಿ ತಂದೀಯುವ ಗುಣದಿಂದ ಸರ್ಪಗಂಧಿ ಮನೋವ್ಯಾಧಿಗಳಿಂದ ನರಳುವವರನ್ನು ಸೂರೆಗೊಂಡಿತು, ಹುಚ್ಚರ ಆಸ್ಪತ್ರೆಗಳಲ್ಲಿ ಅತ್ಯಂತ ಉಪಯೋಗವಾಯಿತು. ನೆಮ್ಮದಿ ತರುವ ಔಷಧ ದ್ರವ್ಯಗಳಲ್ಲಿ ರಿಸರ್ಪಿನ್ನೇ ಅಗ್ರಸ್ಥಾನವನ್ನು ಪಡೆಯಿತು.

ಮನೋರೋಗ ಪೀಡೆಯನ್ನು ತೊಲಗಿಸುವುದಕ್ಕೆ ಹೊಸ ಮಾರ್ಗ ಒಂದಾಯಿತು"[7] ಮೇಲಿನ ವಿವರಣೆಯಿಂದ ಈ ಸಸ್ಯ ಎಷ್ಟು ಅಮೂಲ್ಯವಾದ ಸಂಪತ್ತು ಎನ್ನುವುದು ತಿಳಿಯುತ್ತದೆ. ಆದರೆ ಇದು ಅವಸಾನ ಹೊಂದಿದ ರೀತಿಯೂ ಅಸಮಾಧಾನ, ಕೋಪವನ್ನು ಉಂಟುಮಾಡುತ್ತದೆ. ಮನುಷ್ಯನ ವಿಧ್ವಂಸಕ ವರ್ತನೆಗೆ ಮಿತಿಯೇ ಇಲ್ಲವೇ ಎಂದೆನಿಸುತ್ತದೆ. ಈ ಸಸ್ಯದ ಉಪಯೋಗ ತಿಳಿದ ಬಳಿಕ "ಸರ್ಪಗಂಧಿ"ಯನ್ನು ಹುಡುಕಿ ಅಗೆದು ಬೇರುಗಳನ್ನು ಅಮೇರಿಕಾ ಮೊದಲಾದ ದೇಶಗಳಿಗೆ ರಫ್ತು ಮಾಡುವ ಅಭ್ಯಾಸ, ವಿವೇಚನೆಯಿಲ್ಲದೆ, ಮುಂದಾಲೋಚನೆ ಇಲ್ಲದೆ ನಡೆಯಿತು; ಹವ್ಯಾಸಿಗಳಿಗೆ ಸಾವಿರಾರು ಡಾಲರುಗಳು ಸಂದವು. ಉದ್ಯೋಗವಿಲ್ಲದೆ ಅಲೆಯುತ್ತಿದ್ದವರು ಕೆಲವೇ ತಿಂಗಳುಗಳಲ್ಲಿ ಐಶ್ವರ್ಯವಂತರಾದರು. ಸರ್ಪಗಂಧಿ ನಿಸರ್ಗದಿಂದ ನಿರ್ಮೂಲನವಾಗುತ್ತ ಬಂದಿತು"[8] ಇಲ್ಲಿ ಬಂಡವಾಳಶಾಹಿಯೊಂದರ ದುರಾಸೆ ಇಷ್ಟು ಅಮೂಲ್ಯವಾದದ್ದನ್ನು ಮುಂದಿನ ಪೀಳಿಗೆಗೆ ಇಲ್ಲವಾಗಿಸಿ ಆ ಸಂಪತ್ತಿನ ಸೆಲೆಯನ್ನೇ ಬರಿದು ಮಾಡಿದ ದುರಂತ ಘಟನೆಯೊಂದನ್ನು ಸ್ವಾಮಿ ಅನಾವರಣಗೊಳಿಸಿದ್ದಾರೆ.

ಇದೇ ರೀತಿ 'ಸಿಂಬಿಡಿಯಮ್' ಎಂಬ ಸಸ್ಯದ ಬಗೆಗಿನ ವಿವರಣೆಯೂ ಅವಸಾನದ ಹಂತವನ್ನು ತಲುಪುವುದಕ್ಕಿಂತ ಮುಂಚೆಗಿನ ಪ್ರಾಥಮಿಕ ಹಂತದ ಹುನ್ನಾರಗಳು ರೂಪು ಪಡೆಯುವ ಬಗೆಯನ್ನು ತಿಳಿಸುತ್ತದೆ. ಈ ಸಸ್ಯದಲ್ಲಿರುವ ಅಂಶವು ಎಂತಹ ರಕ್ತಸ್ರಾವವಾದರೂ ಅದರ ಹಸಿರೆಲೆಗಳ ರಸವನ್ನು ಹಿಂಡಿದೊಡನೆಯೇ ನಿಲ್ಲುತ್ತದೆ. ಅದು ಯಾವ ಉರಿಯು, ಬಾಧೆಯೂ ಆಗದೇ ಚರ್ಮದ ಒಳಗಿನ ಮಾಂಸಖಂಡಗಳನ್ನು ನಾಶಪಡಿಸದೆಯೇ ಎಂದು ಅದನ್ನು ಸಣ್ಣ ಪ್ರಯೋಗದ ಮೂಲಕ ಸ್ವಾಮಿಯವರು ಸಾಬೀತು ಪಡಿಸಿದಾಗ ಅಧ್ಯಯನಕ್ಕಾಗಿ ಒಂದಷ್ಟನ್ನು ಸಂಗ್ರಹಿಸಿಕೊಳ್ಳಲಾಗುತ್ತದೆ.

ಈ ಸಂದರ್ಭದಲ್ಲೇ ಅಲ್ಲಿದ್ದ ರೇಂಜರ್ ಕೇಳುವ ಪ್ರಶ್ನೆ ಸ್ವಾಮಿಯವರಲ್ಲಿ ಅಸಮಾಧಾನವನ್ನುಂಟು ಮಾಡುತ್ತದೆ. ರೇಂಜರ್ "ಸರ್, ನಿಮ್ಮ ಹಾಗೆಯೇ ಇನ್ನಾರಾದರೂ ಇಲ್ಲಿಗೆ ಬಂದು ಈ ಗಿಡವನ್ನು ಬೇಕೆಂದರೆ ಅವರಿಗೆ ಎಷ್ಟು ಬೆಲೆ ಹಾಕಬಹುದು, ಒಂದು ಮೂಟೆಗೆ?"[9] ಎನ್ನುತ್ತಾನೆ. ಇದು ಸ್ಥಳೀಯ ಹಂತದಲ್ಲೇ ಕಾಣುವ ಭ್ರಷ್ಟಚಾರದ ಒಂದು ರೂಪವಾಗಿದೆ. ಆದರೆ ಇದನ್ನು ವಿರೋಧಿಸುವ ಸ್ವಾಮಿಯವರು "ಇಲ್ಲಿ ವಾಸಿಸುವ ವನ್ಯಮೃಗಗಳಿಗೆ ಹೇಗೆ ರಕ್ಷಣಾಪ್ರದೇಶವೆಂದು ಕಾವಲು ಕೊಟ್ಟಿದ್ದೀರೋ ಹಾಗೆಯೇ ಈ ಅಮೂಲ್ಯವಾದ ಗಿಡಕ್ಕೂ ರಕ್ಷಣಾ ಪ್ರದೇಶದ ನಿಯಮಗಳನ್ನು ಅನ್ವಯಿಸುವಂತೆ ಜಾರಿಗೆ ತನ್ನಿ"[10] ಎಂದು ಸಲಹೆ ನೀಡುತ್ತಾರಲ್ಲದೆ ತಾವೇ ಖುದ್ದಾಗಿ ಈ ಸಲಹೆಯನ್ನು ಅರಣ್ಯಾಧಿಕಾರಿಗಳಿಗೂ ಬರೆದು ತಿಳಿಸುತ್ತಾರೆ. ಆದರೆ ಈ ಸದುದ್ದೇಶ ಸಲಹೆಗೆ ಪ್ರತಿಯಾಗಿ ಅನಿರೀಕ್ಷಿತ ಪತ್ರವೊಂದು ಅವರ ಕೈ ಸೇರುತ್ತದೆ. ಅದು ಅಧ್ಯಯನದ ದೃಷ್ಟಿಯಿಂದ ಸಂಗ್ರಹಿಸಿಕೊಂಡು ತಂದಿದ್ದ 'ಸಿಂಬಿಡಿಯಮ್'ಗೆ ಪಾವತಿ ಮಾಡಿ ಎಂದು ಕಳುಹಿಸಿಕೊಟ್ಟಿದ್ದ ಬಿಲ್.

ಎರಡು ಮೂಟೆ ಸಿಂಬಿಡಿಯಮ್ ಸೀತಾಳಿ ಗಿಡಗಳಿಗೆ 50/–ರೂಪಾಯಿ ಎಂದು ನಮೂದಿಸಿರಲಾಗಿರುತ್ತದೆ. ಹೀಗೆ ಎದುರಾದ ಅನಿರೀಕ್ಷಿತ ಸಂದರ್ಭ ಬಿ.ಜಿ.ಎಲ್.ಸ್ವಾಮಿಯವರಲ್ಲಿ ಗಾಬರಿಯನ್ನು, ಆಶ್ಚರ್ಯವನ್ನು ಉಂಟು ಮಾಡುತ್ತದೆ. ಇಲ್ಲಿನ ಅಧಿಕಾರಿಗಳು ಎಷ್ಟು ಬೇಗ ವ್ಯಾಪಾರಿ ನೆಲೆಯಲ್ಲಿ ಚಿಂತನೆ ನಡೆಸಿ ಆ ಸಸ್ಯವನ್ನು ಮಾರಾಟದ ವಸ್ತುವನ್ನಾಗಿಸಿ ಅದರ ಮೇಲೆ ಪ್ರಭುತ್ವ ಸಾಧಿಸಲೆಳಸುತ್ತಿದ್ದಾರೆ ಎಂಬ ಅಂಶವೇ ಆ ಸಸ್ಯಕ್ಕೆ ಇನ್ನು ಉಳಿಗಾಲವಿಲ್ಲವೆಂಬುದನ್ನು ತಿಳಿಸುತ್ತದೆ.

'ಮಾತ ಮೂದಲಿಸುವ ಮಹಾರಣ್ಯ ಸರಣಿ' ಅಧ್ಯಾಯದಲ್ಲಿ ಒರುಕುಂಬನ್ ಕಾಡುಪ್ರದೇಶದಲ್ಲಿ ಅಣೆಕಟ್ಟು ಹಾಕಿ ಕೃತಕ ಸರೋವರವೊಂದನ್ನು ನಿರ್ಮಿಸುವ ಕಾರ್ಯದಲ್ಲಿ ಮತ್ತು ಅಲ್ಲಿನ ಅಧಿಕಾರಿಗಳು, ಕೆಲಸಗಾರರ ಮೂಲಸೌಕರ್ಯ, ಅವಶ್ಯಕತೆಗಳನ್ನು ಪೂರೈಸುವ ನಿಟ್ಟಿನಲ್ಲಿ ಐದು ವರ್ಷಗಳೊಳಗೆ ಹದಿನೈದು ಚದರಮೈಲಿ ವಿಸ್ತೀರ್ಣ ಬೆಂಗಾಡಾಗಿ ಹೋದ ಘಟನೆಯನ್ನು ವಿವರಿಸುತ್ತಾರಲ್ಲದೇ ತಮ್ಮ ವಿದ್ಯಾರ್ಥಿಗಳಲ್ಲೇ ಇರಬಹುದಾದ ಅಲ್ಪಬುದ್ಧಿಯನ್ನು ತಿಳಿಸುತ್ತಾರೆ. ಶಾಲ್ಮಲೀ ಮರವನ್ನು ಕುರಿತಾದ ವರ್ಣನೆಗಳನ್ನು ನೆನಪಿಸಿಕೊಳ್ಳುತ್ತಿದ್ದ ಸಂದರ್ಭದಲ್ಲೇ ವರದರಾಜ "ಈ ಮರದ ಉಪಯೋಗವನ್ನೇನಾದರೂ ಅರಿತಿದ್ದರಾ ಅವರು?"[11] ಎಂದು ಪ್ರಶ್ನಿಸುವ ಧಾಟಿಯಲ್ಲೇ ಪರಿಸರದಲ್ಲಿನ ಪ್ರತಿಯೊಂದು ಅಂಶವೂ ಮನುಷ್ಯನಿಗೆ ಉಪಯೋಗವಾಗಬೇಕು ಇಲ್ಲದಿದ್ದಲ್ಲಿ ಅದರ ಇರುವಿಕೆಗೆ ಅರ್ಥವೇ ಇಲ್ಲ ಎಂದು ಭಾವಿಸುವ ನೆಲೆಯೊಂದು ರೂಪುಗೊಂಡಿರುವುದನ್ನು ಕಾಣಬಹುದಾಗಿದೆ.

ಈ ಮೇಲಿನ ಅಂಶಗಳ ಮೂಲಕ ಮನುಷ್ಯನ ಆಕ್ರಮಣಕಾರಿ ವರ್ತನೆಯನ್ನು ಗುರುತಿಸಬಹುದು. ಆದರೆ "ಹಸುರುಹೊನ್ನು" ಕೃತಿ ಈ ರೀತಿಯ ಏಕಮುಖ ಓದನ್ನು ಮಾತ್ರ ನೀಡುವುದಿಲ್ಲ. ಬದಲಿಗೆ ಹಲವು ಆಯಾಮಗಳನ್ನೊದಗಿಸುತ್ತದೆ, ಬಹುಮುಖಿ ಓದಿಗೆ ನೆರವಾಗುತ್ತದೆ. ಕೃತಿಯನ್ನು ಗಮನದಲ್ಲಿರಿಸಿ ಕೊಂಡು ಮನುಷ್ಯನು ಪರಿಸರದ ಇತರೆ ಅಂಶಗಳೊಂದಿಗೆ ಹೊಂದಿರುವ ಸಂಬಂಧವನ್ನು ಅವನ ವರ್ತನೆ ಗುಣಗಳನ್ನಾಧರಿಸಿ ಎರಡು ನೆಲೆಯಲ್ಲಿ ಗುರುತಿಸಬಹುದು.

1. ವಿನಾಶದ ನೆಲೆ

2. ಅನುಸಂಧಾನದ ನೆಲೆ

ಮನುಷ್ಯನು ಪರಿಸರದ ಒಂದಂಶವಾದರೂ ಎಲ್ಲದಕ್ಕೂ ತನ್ನನ್ನೇ ಕೇಂದ್ರವಾಗಿಸಿಕೊಂಡು ಸುತ್ತಮುತ್ತಲಿನ ಎಲ್ಲಾ ವಸ್ತು, ಚರಾಚರ ಜೀವಿಗಳಿಂದ ಲಭಿಸುವ ಉಪಯೋಗವನ್ನು ಸಂಪೂರ್ಣವಾಗಿ ಪಡೆಯುವ ಭರದಲ್ಲಿ ಆಕ್ರಮಣನೀತಿಯನ್ನುಸರಿಸಿ ಎಲ್ಲದನ್ನೂ ಬರಿದು ಮಾಡಿ ಅವುಗಳ ನಾಶಕ್ಕೆ ಕಾರಣವಾಗುವ ನೆಲೆಯೊಂದನ್ನು ಗುರುತಿಸುವ ಹಾಗೆಯೇ ಅದೇ ಪರಿಸರದಲ್ಲಿನ ಎಲ್ಲ ಸಸ್ಯ ಸಂಪತ್ತು, ಪ್ರಾಣಿ, ಜೀವಸಂಕುಲದ ಜೊತೆಗೆ ಅನುಸಂಧಾನ ಮಾಡಿಕೊಂಡು ಜೀವನ ಸಾಗಿಸುತ್ತಿರುವುದು ಇನ್ನೊಂದು ನೆಲೆಯಾಗಿದೆ.

ಬಿ.ಜಿ.ಎಲ್.ಸ್ವಾಮಿಯವರು ಮನುಷ್ಯನ ಬದುಕಿನ ಅವಿಭಾಜ್ಯ ಅಂಗವಾಗಿ ಪ್ರಾಣಿ, ಪಕ್ಷಿ, ಗಿಡ, ಮರಗಳೆಲ್ಲವೂ ರೂಪುಗೊಂಡಿರುವ ಕ್ರಮವನ್ನು ವಿಭಿನ್ನ ನೆಲೆಗಳಲ್ಲಿ ನೋಡಲು ಪ್ರಯತ್ನಿಸಿದ್ದಾರೆ. ಅದು ಅವನ ಧಾರ್ಮಿಕ ನಂಬಿಕೆಗಳಲ್ಲಿ, ಪುರಾಣ ದಂತಕಥೆಗಳಲ್ಲಿ, ವೈದ್ಯಪದ್ಧತಿಯಲ್ಲಿ, ಮೂಲಭೂತ ಅವಶ್ಯಕತೆಗಳಲ್ಲಿ, ರೂಪಿಸಿಕೊಂಡಿರುವ ಸಂಸ್ಕೃತಿಯಲ್ಲಿ, ಕಟ್ಟುವ ಕಾವ್ಯದಲ್ಲಿ ಇಂದಿಗೂ ಜೀವಂತವಾಗಿ ಮುಂದುವರಿಯುತ್ತಿರುವುದನ್ನು ಗುರುತಿಸುವ ಹಾಗೆಯೇ "ಕಾಡೊಳಗಿನ ನಿಜವಾದ ಸಂಗತಿಗಳನ್ನರಿಯದೆ ಕಲ್ಪನೆಯ ಅದ್ಭುತ ಕಥೆಗಳನ್ನು ಹೆಣೆಯುವ ಸಂಪ್ರದಾಯ ಇತರ ದೇಶಗಳಲ್ಲಿರುವಂತೆ ನಮ್ಮ ದೇಶದಲ್ಲಿಯೂ ಬೆಳೆದುಬಂದಿದೆ. ಅಂಥವರ ಬಾಯಿಂದ ಅನೇಕ ಗಿಡಗಳೂ, ಪ್ರಾಣಿಗಳೂ ಅಪಖ್ಯಾತಿ ಅನ್ಯಾಯಕ್ಕೆ ಗುರಿಯಾಗಿದೆ"[12] ಎಂಬುದನ್ನು ಗುರುತಿಸುತ್ತಾರೆ. ಈ ರೀತಿ ಎಲ್ಲವನ್ನು ವಿಶ್ಲೇಷಣೆಗೊಳಪಡಿಸಿ ಸತ್ಯಾಸತ್ಯತೆಗಳನ್ನು ಗುರುತಿಸುವ ದೃಷ್ಟಿಕೋನವೊಂದು ಬಿ.ಜಿ.ಎಲ್.ಸ್ವಾಮಿಯವರಿಗೆ ದತ್ತವಾಗಿರುವುದು ಅವರ ವೈಜ್ಞಾನಿಕ ದೃಷ್ಟಿಕೋನದಿಂದ ಎನ್ನಬಹುದು. ಈ ದೃಷ್ಟಿಕೋನ ಜನರ ನಂಬಿಕೆಗಳ ಮೂಲಕ ಸೃಷ್ಟಿಯಾಗಿರುವ ದಂತಕಥೆ, ಪುರಾಣಗಳಲ್ಲಿ ಇರಬಹುದಾದ ಮೌಢ್ಯವನ್ನು ಬಯಲಿಗೆಳೆಯುತ್ತದೆ.

ಅಜ್ಜಂಪಟ್ಟೆ –ಆಂಟಿಯಾರಿಸ್ ಟಾಕ್ಸಿಕೇರಿಯ ಎಂಬುದು ಈ ರೀತಿಯ ದಂತಕಥೆಯಿಂದ ಅಪಖ್ಯಾತಿಗೆ ಗುರಿಯಾಗಿರುವ ಸಸ್ಯವಾಗಿದೆ. ಈ ಮರದ ರಸ ವಿಷಯುಕ್ತವಾದದ್ದೆಂಬುದೇನೋ ನಿಜವೇ ಆದರೆ ಇದರ ಬಗ್ಗೆ ಹುಟ್ಟಿಕೊಂಡಿರುವ ದಂತಕಥೆಯೊಂದು ಉತ್ಪ್ರೇಕ್ಷೆಯಾಗಿರುವುದನ್ನು ಗುರುತಿಸುತ್ತಾರೆ. ರಾಜನು ತನ್ನ ಬೇಟೆಗಾಗಿ ಈ ಮರದ ರಸವನ್ನು ಅಪೇಕ್ಷಿಸಿದಾಗ ಯಾರೂ ಅದಕ್ಕೆ ಒಪ್ಪದೇ ಕೊನೆಗೆ ಮರಣದಂಡನೆಗೆ ಗುರಿಯಾದ ವ್ಯಕ್ತಿಯಿಂದ ಅದನ್ನು ಸಂಗ್ರಹಿಸುವುದು ಈ ಕಥೆಯ ಸಾರಾಂಶ. ಆದರೆ ಇದರಲ್ಲಿನ ಅಸತ್ಯದ ಭಾಗವನ್ನು ತಿರಸ್ಕರಿಸಿ ಅದರ ಉಪಯೋಗ ಹಾನಿ ಎರಡರ ಬಗ್ಗೆಯೂ ಸರಿಯಾದ ಮಾಹಿತಿಯನ್ನಿಲ್ಲಿ ನೀಡುತ್ತಾರೆ. ಬಿದಿರಿನ ಸಂದರ್ಭದಲ್ಲಿಯೂ ಹಾಗೆಯೇ ಬಿದಿರು ಹೂಬಿಟ್ಟಿತೆಂದರೆ ಜನ ಭಾವಿಸುತ್ತಾರೆ. ಇದು ಕ್ಷಾಮದ ಮುನ್ಸೂಚನೆಯೆಂದು ಭೀತಿಗೊಳ್ಳುತ್ತಾರೆ ಎಂದು ಹೇಳುತ್ತಾ ಅದಕ್ಕೆ ಇರಬಹುದಾದ ವೈಜ್ಞಾನಿಕ ಕಾರಣವನ್ನು ನೀಡುತ್ತಾರೆ. "ರಾಶಿ ರಾಶಿಯಾಗಿ ಬೀಜಗಳ ಮಳೆ ಸುರಿದಾಗ ಇಲಿ ಹೆಗ್ಗಣಗಳ ರಾಜ್ಯಭಾರ ತಾಂಡವವಾಡುತ್ತದೆ. ಬಿದಿರು ಅಕ್ಕಿಯನ್ನು ತಿಂದು ಈ ಪ್ರಾಣಿಗಳ ಸಂತಾನಾಭಿವೃದ್ಧಿ ಚಕ್ರ ರಭಸದಿಂದ ಓಡುತ್ತದೆ. ಮಿತಿಯಿಲ್ಲದ ಸಂತಾನ ಬೆಳೆದು ರೈತನ ಬೆಳೆಗೂ, ಕಣಜಕ್ಕೂ ಮುತ್ತಿಗೆ ಹಾಕುತ್ತವೆ. ಬಿದಿರು ಕುಲ ಅಳಿಯಿತು, ದಂಶಕ ಪ್ರಾಣಿಕುಲ ಬೆಳೆಯಿತು. ರೈತಕುಲ ಕಷ್ಟನಷ್ಟಗಳಿಗೀಡಾಯಿತು. ಪ್ಲೇಗು ರೋಗ ಹರಡಿತು, ಜನವನ್ನು ಆಹುತಿ ತೆಗೆದುಕೊಂಡಿತು. ಈ ಸುತ್ತು ಸರಪಣಿ ಬಿದಿರು ಹುಟ್ಟಿಕೊಂಡ ಆದಿಕಾಲದಿಂದಲೂ ಅವಿಚ್ಛಿನ್ನವಾಗಿ ಬಿದಿರು ಮತ್ತೆ ಮತ್ತೆ ಮರಳಿ ಒದಗುತ್ತ ಬಂದಿದೆ"[13] ಎಂದು ಕಾರಣವನ್ನು ತಿಳಿಸುವುದು ಮಾತ್ರವಲ್ಲ. ಅದು ಹೇಗೆ ಬಿದಿರು

ಬೆಳೆಯುವ ದೇಶಗಳಲ್ಲಿ ಆದಿಕಾಲದಿಂದಲೂ ಜನಜೀವನ ಬಿದಿರಿನೊಂದಿಗೆ ನಂಟುಗೊಂಡು ಬಂದಿದೆ. ಮಗು ಹುಟ್ಟಿದ ಗಳಿಗೆಯಿಂದ ಅದು ಬೆಳೆದು ಶತವರ್ಷಕಾಲ ಜೀವಿಸಿ ಅಳಿದ ಗಳಿಗೆಯಲ್ಲಿ ಕೂಡ ಬಿದಿರಿನ ನೆರವು ಸತತವಾಗಿ ಒದಗಿಬರುತ್ತದೆ ಎನ್ನುವುದನ್ನು ವಿವರಿಸುತ್ತಾರೆ. ಜೊತೆಗೆ ಬಿದಿರು ಎನ್ನುವ ಪದ ತಮ್ಮ ವಿದ್ಯಾರ್ಥಿಗಳಲ್ಲೇ ಮೂಡಿಸುವ ಹಲವು ಭಾವನೆಗಳನ್ನು ತಿಳಿಸುತ್ತಾ ಸಾಹಿತ್ಯ ಕೃತಿಗಳಲ್ಲಿ ಕವಿಗಳು ಕಂಡಿರುವ ಬಗೆ, ವರ್ಣಿಸುವ ರೀತಿಯನ್ನು ಕನ್ನಡ ಮತ್ತು ತಮಿಳು ಸಾಹಿತ್ಯಗಳ ಹಿನ್ನೆಲೆಯಲ್ಲಿ ಅನಾವರಣಗೊಳಿಸುತ್ತಾರೆ.

ಸ್ವಾರ್ಥ ಮೂಲದ ಮನುಷ್ಯ ವರ್ತನೆ ಹಲವು ಉಪಯುಕ್ತ ವಸ್ತುಗಳನ್ನು ಬೇರೆಯವರಿಗೆ ತಿಳಿಯಪಡಿಸದೇ ಆ ರಹಸ್ಯಗಳನ್ನು ತನ್ನಲ್ಲೇ ಅಡಗಿಸಿಕೊಂಡು ತನ್ನೊಂದಿಗೆ ಅದನ್ನು ಮಣ್ಣಾಗಿಸುವ ಹಲವು ಘಟನೆಗಳು ನಡೆಯುತ್ತಲೇ ಇರುತ್ತವೆ. ಬಹುಶಃ ನಾಟಿವೈದ್ಯಪದ್ಧತಿಯ ಅಳಿವಿಗೆ ಇದೂ ಒಂದು ಕಾರಣವಿರಬಹುದೇನೋ. ಇಂಥಹದ್ದೊಂದು ಸನ್ನಿವೇಶವನ್ನು 'ಹಸುರುಹೊನ್ನು' ಕೃತಿಯಲ್ಲಿ ನೋಡಬಹುದು. ಸಸ್ಯ ಸಂಗ್ರಹಣ ಕಾರ್ಯದಲ್ಲಿ ಎಲ್ಲರೂ ನಿರತರಾಗಿದ್ದಾಗ ಇಳವರಸ ಮಜ್ಜಿಗೆ ಹುಲ್ಲನ್ನು ಸಂಗ್ರಹಿಸಲೆಂದು ಹೋದಾಗ ಪೊದೆಯಲ್ಲಿ ಸೇರಿಕೊಂಡಿದ್ದ ನೊಣಗಳ ಗುಂಪು ಅವನನ್ನು ಸೇರಿದಂತೆ ಎಲ್ಲರನ್ನೂ ಕಚ್ಚ ತೊಡಗುತ್ತದೆ. ಅದರ ಉರಿಯಿಂದಲೂ, ನೋವಿನಿಂದಲೂ ಬಾಧೆ ಪಡುತ್ತಿದ್ದಂವರಿಗೆ ರಾಮನಾಯಕ ಎಲ್ಲಿಂದಲೋ ಒಂದಷ್ಟು ಚಕ್ಕೆಯ ಚೂರುಗಳನ್ನು ಕೊಟ್ಟು ಅದರಿಂದ ನೊಣಗಳು ಕಡಿದಿದ್ದ ಭಾಗವನ್ನು ತಿಕ್ಕಲು ಹೇಳುತ್ತಾನೆ. ಆ ರೀತಿ ಮಾಡಿದೊಡನೆ ಉರಿ, ರಕ್ತಸ್ರಾವವಾಗುವುದಲ್ಲಿ ನಿಂತು ಹೋಗುತ್ತದೆ. ಇದರಿಂದ ಆಶ್ಚರ್ಯಚಕಿತರಾದ ಬಿ.ಜಿ.ಎಲ್.ಸ್ವಾಮಿಯವರು ಅದು ಯಾವ ಮರದ ಚಕ್ಕೆಗಳು ಎಂದು ತಿಳಿಯಲು ಅಪೇಕ್ಷಿಸಿದಾಗ ರಾಮನಾಯಕ ಅದರ ವಿಷಯವನ್ನು ಹೇಳಲು ನಿರಾಕರಿಸಿ, ಸುಳ್ಳು ಹೇಳಿ ತಪ್ಪಿಸಿಕೊಳ್ಳಲು ಪ್ರಯತ್ನಿಸುವುದು ಸ್ವಾಮಿ ಅವರಲ್ಲಿ ಬೇಸರ ಮೂಡಿಸುತ್ತದೆ. ಈ ರೀತಿ ತಮಗೆ ತಿಳಿದಿರುವ ವಿಷಯಗಳನ್ನು ಗುಟ್ಟಾಗಿಸಿಕೊಂಡು ಮಣ್ಣು ಸೇರಿಸುವ ಮಂದಿ ಎಷ್ಟು ಜನರಿರುವರೋ ಎಂಬ ಅಂಶ ವಿಷಾದನೀಯವೆನಿಸುತ್ತದೆ. ಅಂತಹ ಹಲವು ಸಂಗತಿಗಳ ಮೇಲೆ ಇದು ಬೆಳಕು ಚೆಲ್ಲುತ್ತದೆ.

ಇನ್ನು ಪುರಾಣ, ಮಹಾಕಾವ್ಯಗಳ ಪಾತ್ರಗಳನ್ನು ಜೀವಂತವಾಗಿರಿಸಿಕೊಂಡಿರುವ ಜನರ ರೀತಿಯು ಗಮನಾರ್ಹವಾದುದಾಗಿದೆ. ಇಂತಹ ಅನೇಕ ಸಂದರ್ಭಗಳನ್ನು ಸ್ವಾಮಿಯವರು ನಮ್ಮ ಮುಂದಿಡುತ್ತಾರೆ. ಆಗುಂಬೆಯ ಕಾಡುಗಳಿಗೆ ಭೇಟಿ ನೀಡಿದ್ದ ಸ್ವಾಮಿಯವರು ತುಂಬ ಆಕರ್ಷಕವಾಗಿ ಕಾಣಿಸುತ್ತಿದ್ದ ಗಿಡವನ್ನು ತೋರಿಸಿ ಗಿಡ್ಡನಾಯಕರಿಗೆ ಅದರ ಹೆಸರನ್ನು ಕೇಳಿದಾಗ ಅದನ್ನು ಮದುವೆಯ ಸಂದರ್ಭಗಳಲ್ಲಿ ಹೆಚ್ಚು ಉಪಯೋಗಿಸುತ್ತೇವೆ ಎಂದು ಹಿಂಜರಿದೇ ಹೆಂಗಸರು ಇದನ್ನು ಸೀತೆಯ

ದಂಡೆ ಎಂದು ಕರೆಯುತ್ತಾರೆ ಎಂದಾಗ ಸೀತೆ ಮುಡಿದ ಹೂದಂಡೆ ಎಂದು ಉದ್ಗರಿಸಿ ಪುಲಕಿತರಾಗುತ್ತಾರೆ.

ಹಾಗೆಯೇ ಹಲವಾರು ಮರ-ಗಿಡಗಳು ಐತಿಹಾಸಿಕ ಘಟನೆಗಳ ಜೊತೆಗೆ ನಂಟು ಹೊಂದಿರುವಂತೆ ಸಾಂಸ್ಕೃತಿಕ, ಧಾರ್ಮಿಕ, ಸಾಹಿತ್ಯ ನೆಲೆಗಳಲ್ಲಿ ಪ್ರಾಮುಖ್ಯತೆ ಪಡೆದುಕೊಂಡು ಇವತ್ತಿಗೂ ಜನರ ನಂಬಿಕೆಗಳಲ್ಲಿ ಆಳವಾಗಿ ಬೇರೂರಿರುವಂತಹದ್ದನ್ನು ಕಾಣಬಹುದಾಗಿದೆ. ಕದಂಬವೃಕ್ಷ ಇದಕ್ಕೊಂದು ಉತ್ತಮ ನಿದರ್ಶನ. ಏಕೆಂದರೆ ಭಾರತದಾದ್ಯಂತ ಬಹುಕಾಲದಿಂದಲೂ ನಮ್ಮ ಸಂಸ್ಕೃತಿಯೊಂದಿಗೆ ಬೆಳೆದು ಬಂದಿರುವಂತಹದ್ದು ಈ ವೃಕ್ಷ. "ಉತ್ತರ ಭಾರತದ ಪುರಾಣಗಳ ಪ್ರಕಾರ ಕೃಷ್ಣನ ಬಾಲಲೀಲೆಗಳೊಡನೆ ನಿಕಟ ಸಂಬಂಧ ಪಡೆದಿದ್ದ ಮರ ಕದಂಬ. ತ್ರಿಪುರ ಸಂಹಾರವಾದ ಬಳಿಕ ಆಯಾಸಗೊಂಡ ಶಿವನ ಹಣೆಯಿಂದ ಬೆವರು ಹನಿಯೊಂದು ಬಿದ್ದು ಮರವಾಗಿ ಮಾರ್ಪಟ್ಟ ಕದಂಬ. ಉಮೆ ಕದಂಬವನವಾಸಿನಿ. ಕಾದಂಬಕಾಂತಾರವಾಸಪ್ರಿಯೆ, ಕದಂಬಪುಷ್ಪಗಳಿಂದ ಶಿವನನ್ನು ಅರ್ಚಿಸಿದಳು; ಶಿವನಿಗೆ ಪ್ರಿಯವಾದ ಹೂ. ಮಥುರೆಯ ಸೋಮಸುಂದರೇಶ್ವರನಿಗೆ ಸ್ಥಳ ವೃಕ್ಷ"[14] ಎಂದು ಇದರ ಬಗೆಗೆ ಹಲವು ಕಥೆಗಳಿರುವುದನ್ನು ಕಾಣಬಹುದಾಗಿದೆ.

ಕವಿಗಳಂತೂ ಷಟ್ಪದೇಷ್ಟ, ಪ್ರಾವೃಷೇಣ್ಯ, ಹರಿಪ್ರಿಯ, ಕದಂಬಕ ಹೀಗೆ ಹಲವು ರೀತಿಯಲ್ಲಿ ಕರೆದಿದ್ದಾರೆ. "ಹೂವಿನ ಮಾಧುರ್ಯಕ್ಕಂತೂ ಬಹುಮಂದಿ ಸಂಸ್ಕೃತದ ಕವಿಗಳು ಮನಸೋತಿದ್ದಾರೆ. ಕದಂಬ ಮರದ ಮೇಲೆ ಬೀಸಿಬಂದ ಗಾಳಿಗೇ ಮಾದಕತ್ವವಿತ್ತು ಎಂದು ಅಭಿಪ್ರಾಯಪಡುತ್ತಾರೆ. ಮದ್ಯರಾಣಿಯಾದ ವಾರುಣಿ ಕದಂಬ ಮರದ ಪೊಟರೆಯಲ್ಲಿಯೇ ಪ್ರತಿಷ್ಠಿತಳಾಗಿ ಬಿಟ್ಟಳಂತೆ. ಹೂಗಳ ಪರಿಮಳದಿಂದ ಮತ್ತಗೊಂಡ ಬಲರಾಮನು ತೀವ್ರ ಮದ್ಯಪಾನಾಸಕ್ತನಾಗಿ ಬಿಟ್ಟನಂತೆ. ಹೂಗಳಿಂದ ಮದ್ಯ ಇಳಿಸುತ್ತಿದ್ದರಂತೆ, ತಮಿಳರಿಗೆ ಕದಂಬಮರ ಸಂಗ್ರಾಮ ವಿಜಯದ ಪ್ರತಿಮೆಯಾಗಿ ಅಡಿಗಡಿಗೆ ಕಾಣಿಸಿಕೊಳ್ಳುತ್ತದೆ. ಸಂಘ ಕಾಲದ ದೊರೆಗಳಿಗೆ ಇದು ರಾಜ್ಯವನ್ನು ಕಾಯುವ ಕಾವಲುಮರ. ಇದನ್ನು ಕಡಿಯಕೂಡದೆಂಬ ಕಟ್ಟಳೆಯಿತ್ತು ಶತ್ರುಗಳಿಗೆ ಈ ಮರವೇ ಮೊದಲನೆಯ ಗುರಿ. ಮರವನ್ನು ಉರುಳಿಸಿದರೆ ರಾಜ್ಯಶ್ರೀ ವಶವಾದಂತೆಯೇ ಹಾಗೆ ಕಡಿದ ಮರದಿಂದ ರಣಭೇರಿಗಳನ್ನು ತಯಾರಿಸುತ್ತಿದ್ದರು. ಮರ ಇನ್ನೊಂದು ದೃಷ್ಟಿಯಿಂದಲೂ ಪೂಜ್ಯವಾಗಿತ್ತು. ಮುರಗದೇವನು ಕದಂಬ ಹೂಗಳ ಸರವನ್ನು ತೊಡುವವನು ಮಾತ್ರವಲ್ಲ, ಮರದಲ್ಲಿ ಅಡಗಿರುವವನೂ ಹೌದು. ಭಯಂಕರವಾದ ದೈವವೊಂದು ಮರದಲ್ಲಿ ಮನೆ ಮಾಡಿತ್ತೆಂಬ ನಂಬಿಕೆ ಸಾಧಾರಣವಾಗಿತ್ತು"[15] ಹೀಗೆ ಈ ಮರದ ಬಗೆಗೆ ದೈವೀಕ ನಂಬಿಕೆಗಳು ಜನರಲ್ಲಿ ಮನೆ ಮಾಡಿರುವುದಲ್ಲದೆ, ಸಾಂಸ್ಕೃತಿಕ ಕುರುಹಾಗಿ ಉಳಿದು ಮನುಷ್ಯನ ಜೊತೆಗೆ ಆಳವಾದ ಸಂಬಂಧವನ್ನು ಉಳಿಸಿಕೊಂಡು ಬಂದಿರುವುದನ್ನು ನೋಡಬಹುದಾಗಿದೆ.

ಇದೇ ರೀತಿಯಾಗಿ ಆಯುರ್ವೇದ ಗ್ರಂಥಗಳಲ್ಲಿ ಬಹುಕಾಲದಿಂದ ಪ್ರಸಿದ್ಧವಾಗಿರುವ 'ಸಪ್ತಪರ್ಣಿ' (ಆಲ್‌ಸ್ಟೋನಿಯ ಸ್ಕೋಲೇರಿಸ್) ಎಂಬ ಮರ ಪಾಂಡಿತ್ಯದ ಸಂಕೇತವಾಗಿಯೂ ಬಳಕೆಯಲ್ಲಿದ್ದಿದ್ದನ್ನು ನೋಡಬಹುದಾಗಿದೆ. "ಹಿಂದಿನ ಕಾಲದಲ್ಲಿ ಸ್ನಾತಕ ವಿದ್ಯಾರ್ಥಿಗಳಿಗೆ ಸಪ್ತಪರ್ಣಿ ಕೊಂಬೆಯೊಂದನ್ನು ಸ್ನಾತಕ ಚಿಹ್ನೆಯಾಗಿ ಕೊಡುವ ಸಂಪ್ರದಾಯ ಬಂಗಾಳ ದೇಶದಲ್ಲಿ ಇದ್ದಿತಂತೆ. ವೈಜ್ಞಾನಿಕ ನಾಮದ್ವಯದ ಎರಡನೆಯ ಪದ 'Scholaris' ಪಾಂಡಿತ್ಯಕ್ಕೆ ಸಂಬಂಧಪಟ್ಟದ್ದು – ಎಂಬುದು ಈ ಸಂಪ್ರದಾಯವನ್ನು ಸೂಚಿಸುವುದೆಂದು ಹೇಳುತ್ತಾರೆ"[16] ಹೀಗೆ ಸುತ್ತಮುತ್ತಲಿನ ಪರಿಸರದ ಮರಗಿಡಗಳೊಂದಿಗೆ ಸಾಮರಸ್ಯವನ್ನು ಸಾಧಿಸಿ ಅವುಗಳ ಉಪಯೋಗ ಪಡೆಯುತ್ತಲೇ ತನ್ನ ನಿರಂತರ ಪಯಣದಲ್ಲಿ ಅವುಗಳಿಗೆ ಹಲವು ನಂಬಿಕೆಗಳ ಹಿನ್ನೆಲೆಯಲ್ಲಿ ನೀಡಿರುವ ಪ್ರಾಮುಖ್ಯತೆಯನ್ನು ಅನುಸಂಧಾನದ ನೆಲೆಯಲ್ಲಿ ಗುರುತಿಸಿಕೊಳ್ಳಬಹುದಾಗಿದೆ.

ಬಿ.ಜಿ.ಎಲ್.ಸ್ವಾಮಿಯವರ ಕುತೂಹಲವು ಕುತೂಹಲಗೊಂಡ ವಸ್ತುವಿನ ಬೆನ್ನೇರಿ ಹೋಗಿ ಅದರ ಮೂಲವನ್ನು ಹುಡುಕಿ ಸತ್ಯಾಸತ್ಯತೆಗಳನ್ನು ತಿಳಿಯುವ ಬಗೆಯು ಗಮನಾರ್ಹವಾದುದಾಗಿದೆ. ರೋಡಿನ ಬದಿಯಲ್ಲಿ ವ್ಯಾಪಾರಿಯೊಬ್ಬ ಮರದ ತುಂಡೊಂದನ್ನು ಹೆಳಕೆಯಂತೆ ಸೀವಿ ಮಾರುತ್ತಿದ್ದದ್ದನ್ನು ನೋಡಿ ಕುತೂಹಲಗೊಂಡರು. ಇದೇ ದೃಶ್ಯವನ್ನು ಹಲವು ಬಾರಿ ಬೇರೆ ಬೇರೆ ನಗರಗಳಲ್ಲಿ ನೋಡಿದಾಗ ಅದರ ಹೆಳಕೆಯೊಂದನ್ನು ಕೊಂಡುಕೊಂಡು ಸೂಕ್ಷ್ಮದರ್ಶಕದಲ್ಲಿ ಪರೀಕ್ಷಿಸಿ ಪೂರ್ಣಮಾಹಿತಿಯನ್ನು ಪಡೆಯಲು ಅಸಾಧ್ಯವಾದಾಗ ಅದನ್ನು ತಿಳಿಯಬೇಕೆಂಬ ಕುತೂಹಲ ಅವರನ್ನು ಪೋಲೀಸ್ ತನಿಖೆಯ ಹಂತಕ್ಕೆ ಕರೆದೊಯ್ದಿತು. ಗೆಳೆಯನಾಗಿದ್ದ ಪೋಲೀಸ್‌ನೊಬ್ಬನ ಸಹಾಯದಿಂದ ವ್ಯಾಪಾರಿಯ ತನಿಖೆ ನಡೆಸಿ ಅದರ ವಿಷಯವಾಗಿ ತಿಳಿದುಕೊಳ್ಳುತ್ತಾರೆ. ಅದರ ಹೆಸರೇ ಮರಬಳ್ಳಿ ಗೆಣಸು – ಡಯಸ್ಕೋರಿಯ. ಇದರ ಬಗೆಗೆ ವಿವರಿಸುತ್ತಾ ಅದರ ಇತರೆ ಉಪಯೋಗಗಳನ್ನು, ಔಷಧಿಯ ಗುಣಗಳನ್ನು ತಿಳಿಸುವುದನ್ನು ನೋಡಬಹುದಾಗಿದೆ. ಇಡೀ ಕೃತಿಯಲ್ಲಿ ಬಿ.ಜಿ.ಎಲ್.ಸ್ವಾಮಿಯವರು ಕೇವಲ ಒಬ್ಬ ನಿರೂಪಕನಾಗಿ ಕಂಡುಬರದೆ ಒಂದು ಪ್ರಮುಖ ಪಾತ್ರವಾಗಿ, ಮಾಹಿತಿಕಾರನಾಗಿ, ವೈಜ್ಞಾನಿಕ ದೃಷ್ಟಿಕೋನವುಳ್ಳ ವ್ಯಕ್ತಿಯಾಗಿ, ಅಧ್ಯಾಪಕನಾಗಿ, ಸಾಹಿತ್ಯಾಸಕ್ತನಾಗಿ ಕಂಡುಬರುತ್ತಾರೆ.

ಬಿ.ಜಿ.ಎಲ್.ಸ್ವಾಮಿಯವರಿಗೆ ಜ್ಞಾನದ ಅರಿವು ಮುಖ್ಯವೇ ಹೊರತು ಅದನ್ನು ಯಾರಿಂದ ಯಾವ ವರ್ಗದವರಿಂದ ಪಡೆಯಬೇಕೆಂಬುದರಲ್ಲಿ ಗೊಂದಲವಿಲ್ಲ, ಏಕೆಂದರೆ ನಗರದಲ್ಲಿನ ವಿಜ್ಞಾನಿಯಷ್ಟೇ ಕಾಡಿನಲ್ಲಿ ಜೀವಿಸುವ ಮನುಷ್ಯನ ಜ್ಞಾನದ ಬಗ್ಗೆಯೂ ಅವರಿಗೆ ಗೌರವವಿದೆ, ನಂಬಿಕೆಯಿದೆ. ಇಂತಹದಕ್ಕೆ ಹಲವು ನಿದರ್ಶನಗಳನ್ನು ನಾವು ಕೃತಿಯಲ್ಲಿ ನೋಡಬಹುದಾಗಿದೆ. 'ಮಾತ ಮೂದಲಿಸುವ ಮಹಾರಣ್ಯ ಸರಣಿ' ಎಂಬ ಅಧ್ಯಾಯದಲ್ಲಿ ಬರುವ ಚೀಫ್ ಕನ್ಸರ್‌ವೇಟರ್ ಹಾಗೂ

ಕಾಡಿನ ವೈದ್ಯ ಮರುಂದು ಇಬ್ಬರೂ ಒಂದೇ ಗಿಡವನ್ನು ಕ್ಲುಪ್ತವಾದೊಂದು ವ್ಯಾಧಿಗೆ ಮದ್ದು ಎಂದು ಹೇಳುತ್ತಾರೆ. ಇವರಿಬ್ಬರ ಜ್ಞಾನದ ಬಗ್ಗೆಯೂ ಸ್ವಾಮಿಯವರಿಗೆ ನಂಬಿಕೆ, ಗೌರವಗಳಿವೆ. "ಗಿಡವೊಂದರ ಮದ್ದಿನ ಗುಣವನ್ನು ಕಂಡುಕೊಳ್ಳಲು ಸ್ವಾಮಿಯವರು ಅನುಸರಿಸುತ್ತಿರುವ ಮಾರ್ಗವನ್ನಿಲ್ಲಿ ಗಮನಿಸಬೇಕು. ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯ ಮೇಲು ರಚನೆಗೆ ಸೇರಿದ ಕನ್ಸರ್‌ವೇಟರು ಮತ್ತು ತಳರಚನೆಗೆ ಸೇರಿದ ಮುರುಂದು – ಇವರಿಬ್ಬರ ಸಮಾನ ಆಯ್ಕೆಯನ್ನು ಗೌರವಿಸುತ್ತಿರುವ ಬಿ.ಜಿ.ಎಲ್.ಸ್ವಾಮಿಯವರ ನಿರ್ಣಯದಲ್ಲಿ ದ್ರಾವಿಡ ಭಾಷೆಗಳ ಮೂಲ ಲಕ್ಷಣಗಳನ್ನು ಕಂಡು ಹಿಡಿಯಲು ಅನುಸರಿಸುವಷ್ಟೇ ವೈಜ್ಞಾನಿಕ ಪ್ರಜ್ಞೆ ಕೆಲಸ ಮಾಡಿದೆ. ಜೊತೆಗೆ, ಇಲ್ಲಿನ ನಿರೂಪಣೆ ಸಸ್ಯ ಶಾಸ್ತ್ರೀಯ ಪ್ರವಾಸದ ವರ್ತಮಾನ ಕಾಲದಿಂದ ಮದರಾಸಿಗೆ ಹಿಂದಿರುಗಿದ ನಂತರದ ಸಂಶೋಧನೆಯ ಮುನ್ನೋಟಗಳನ್ನು ಮೈಗೂಡಿಸಿಕೊಂಡಿರುವುದು ಕಾಲಾನುಕ್ರಮಣಿಕೆಯ ಭಂಜನೆಯಾಗಿದೆ"[17] ಈ ರೀತಿಯ ಹಲವು ಸಂದರ್ಭಗಳಲ್ಲಿ ಸ್ವಾಮಿಯವರು ತಳೆಯುವ ಧೋರಣೆಯು ಗಮನಾರ್ಹವಾದುದಾಗಿದೆ.

ಪರಿಸರದಲ್ಲಿನ ವನಸಂಪತ್ತಿನ ಬಗೆಗೆ ಹಲವು ಮಾಹಿತಿಗಳನ್ನು ನೀಡುತ್ತ ಅದರ ಸ್ವರೂಪ, ಗುಣ–ಲಕ್ಷಣ, ವೈವಿಧ್ಯತೆ, ಉಪಯೋಗ, ಸೃಷ್ಟಿವೈಚಿತ್ರ್ಯವನ್ನು ಚಿತ್ರಿಸಿರುವ ಬಿ.ಜಿ.ಎಲ್.ಸ್ವಾಮಿಯವರಿಗೆ ಅದೇ ಪರಿಸರದಲ್ಲಿರುವ ಮನುಷ್ಯ, ಅವನ ವರ್ತನೆಗಳು ಕೆಲವೊಮ್ಮೆ ಗೌರವ ಭಾವನೆಯನ್ನು ಮೂಡಿಸುತ್ತವೆ. ಇದು ಹಲವು ಸಂದರ್ಭಗಳಲ್ಲಿ ವಿಚಿತ್ರವೆನಿಸುತ್ತದೆ ಜೊತೆಗೆ ಆಶ್ಚರ್ಯ, ಅಸಮಾಧಾನಗಳನ್ನು ಉಂಟುಮಾಡುತ್ತವೆ. ಸದಾ ಬೇರೆಯವರ ಕೆಲಸಕ್ಕೆ ತೊಡಕಾಗಿ ತನ್ನ ಅಧಿಕಾರವನ್ನು ಸ್ಥಾಪಿಸಲೆಳಸಲು ಪ್ರಯತ್ನಿಸುವ ಶಿಕ್ಷಣ ವ್ಯವಸ್ಥೆಯೊಂದರಲ್ಲಿ ಉನ್ನತ ಅಧಿಕಾರದಲ್ಲಿರುವವರು (ಪ್ರಿನ್ಸಿಪಾಲರು) ತಮ್ಮ ಅಲ್ಪಬುದ್ಧಿಯಿಂದ ಹೊರಡಿಸುವ ಆಜ್ಞೆಗಳು, ಬಖೈರುಗಳು ಇಂದಿನ ಕಲುಷಿತ ವ್ಯವಸ್ಥೆಗೆ ಹಿಡಿದಿರುವ ಕನ್ನಡಿಯಂತಿದೆ. ತಮ್ಮ ಅಧಿಕಾರದ ದರ್ಪ, ಪ್ರತಿಷ್ಠೆಯನ್ನು ಮೆರೆಯಲು ಹೂಡುವ ಅನೇಕ ಹುನ್ನಾರಗಳು ಅವರ ಪಾಲಿಗೇ ಮುಳುವಾಗಿ ಕೊನೆಗೆ ನಗೆಪಾಟಲಿಗೀಡಾಗುವ ಪ್ರಸಂಗಗಳು ಕೋಪ, ಬೇಸರ, ನಗೆಯನ್ನು ತರುತ್ತದೆ. ಪ್ರತಿಬಾರಿಯೂ ಅಧ್ಯಯನದ ದೃಷ್ಟಿಯಿಂದ ಪ್ರವಾಸ ಹೊರಟಾಗಲೂ ಏನಾದರೂ ಕೊಂಕು ತೆಗೆಯದೆ, ಅವರನ್ನು ತೆಗಳದೆ ಇದ್ದರೆ ತಮ್ಮ ಈ ಅಧಿಕಾರವಿರುವುದೇ ವ್ಯರ್ಥವೆಂದು ಭಾವಿಸುವಂತಿದೆ. ಬಿ.ಜಿ.ಎಲ್.ಸ್ವಾಮಿಯವರು ತಾವು ಕೆಲಸ ಮಾಡುವ ಕಾಲೇಜಿನ ಪ್ರಿನ್ಸಿಪಾಲಿನ ಮತ್ತವನ ಮ್ಯಾನೇಜರಾಗಿ ಇರುವ ಅರ್ಥಾತ್ ಚಿತ್ರಗುಪ್ತನ ವರ್ತನೆಗಳ ಬಗೆಗೆ ವಿವರಿಸುತ್ತ "ಚಿತ್ರಗುಪ್ತನಿಗಂತೂ ಇಪ್ಪತ್ತೆಂಟು ವರ್ಷಗಳಿಂದ ಸರ್ಕಾರಕ್ಕೆ ಉಳಿತಾಯ ಮಾಡಿ ಮಾಡಿ, ಸವೆದು ಸವೆದು, ಅನುಭವದ ಅತಿರೇಕಗಳು ಇವನ ಒಂದೊಂದು ನರೆಕೂದಲಿನಲ್ಲಿಯೂ ನಿಮಿರಿ ನಿಂತಿವೆ. "ಕಾಲೇಜು ನನ್ನ ಸ್ವಂತ ಆಸ್ತಿ"

ಎಂಬುದು ನನ್ನ ಪ್ರಿನ್ಸಿಪಾಲನ ಅಭಿಪ್ರಾಯವಾದರೆ, ಆ ಆಸ್ತಿಯನ್ನು ಹೊರುತ್ತಿರುವ ಫಣಿರಾಯನೆಂಬ ಸ್ವಂತ ನಂಬಿಕೆ ಈ ಚಿತ್ರಗುಪ್ತನದು. ಒಬ್ಬನ ವಿಷಯದಲ್ಲಿ ಹತ್ತು ಜನ ಬೇರೆ ಬೇರೆ ಅಭಿಪ್ರಾಯಗಳನ್ನಿಟ್ಟುಕೊಂಡಿರುವುದು ಸಾಮಾನ್ಯ. ಆದರೆ ನನ್ನ ಪ್ರಿನ್ಸಿಪಾಲನೂ ಚಿತ್ರಗುಪ್ತನೂ ಇದಕ್ಕೆ ಹೊರತು; ಇವರೀರ್ವರ ವಿಷಯದಲ್ಲಿ ಎಲ್ಲರ ಅಭಿಪ್ರಾಯವೂ ಒಂದೇ"[18] ಈ ಮಾತುಗಳು ಅಲ್ಲಿನ ಬಿಗಿವಾತಾವರಣವನ್ನು, ಅಧಿಕಾರಶಾಹಿ ವರ್ಗದ ರಾಜಕಾಣವನ್ನು ಅನಾವರಣಗೊಳಿಸುತ್ತದೆ.

ಪಯಣದ ವೆಚ್ಚದ ಮೊಬಲಗನ್ನು ಸರ್ಕಾರ ಕೊಡುತ್ತದೆಯಾದರೂ ಯಾವ ಯಾವುದೋ ಕಾರಣದಿಂದಾಗಿ ಸ್ವಪ್ರತಿಷ್ಠಾರೋಗ ಪೀಡಿತನಾಗಿ ಕಿರುಕುಳ ಕೊಡುವ ಪ್ರಿನ್ಸಿಪಾಲನ ವರ್ತನೆಗೆ ಕೆಲವು ಕಾರಣಗಳನ್ನು ಸ್ವಾಮಿಯವರು ಊಹಿಸುತ್ತಾರೆ. "ಈತನಿಗೆ ಸದಾ ನನ್ನ ವಿಷಯದಲ್ಲಿ ಒಂದು ದೂರಿದೆ; ಹೇಗಾದರೂ ಮಾಡಿ ನನ್ನ ಕೆಲಸವನ್ನು ಸಾಧಿಸಿಕೊಳ್ಳುವೆನೆಂದು. ಈ ಅಭಿಪ್ರಾಯಕ್ಕೆ ತಳಹದಿಯಿಲ್ಲ. ಹೊರ ವಿಶ್ವವಿದ್ಯಾಲಯಗಳಲ್ಲಿಯೂ, ಹೊರದೇಶಗಳಲ್ಲಿಯೂ ಆಗಾಗ ನಡೆಯುವ ಸೆಮಿನಾರು ಸಿಂಪೋಜಿಯಂಗಳೀಗೆ ನನಗೆ ಆಹ್ವಾನ ಬರುತ್ತದೆ; ಇಲ್ಲವೆ, ಉಪನ್ಯಾಸ ಕೊಡಬೇಕೆಂದು ಆಮಂತ್ರಣ ಬರುತ್ತದೆ. ಇಂಥ ಸಂದರ್ಭಗಳಲ್ಲಿ ಆಮಂತ್ರಣ ಕೊಟ್ಟವರೇ ನನ್ನ ಖರ್ಚು ಎಲ್ಲವನ್ನು ವಹಿಸುತ್ತಾರೆ. ನಮ್ಮ ಸರ್ಕಾರಕ್ಕೆ ಒಂದು ಪೈಸೆ ವೆಚ್ಚವೂ ಇರದು. ಆಮಂತ್ರಣಗಳನ್ನು ಒಪ್ಪಿಕೊಳ್ಳುವುದಕ್ಕೆ ಸರ್ಕಾರದ ಅನುಮತಿ ಕೇಳಿದಾಗೆಲ್ಲ ನನ್ನ ಪ್ರಿನ್ಸಿಪಾಲು ಅದೇಕೋ ಉರಿದುಬೀಳುತ್ತಾನೆ. "ಅನುಮತಿ ಕೊಡಬೇಕಾಗಿಲ್ಲ" ಎಂದು ಟಿಪ್ಪಣಿ ಬರೆದು ಮೇಲಾಧಿಕಾರಿಗಳಿಗೆ ಅನುಮೋದನೆಗಾಗಿ ಕಳುಹಿಸುತ್ತಾನೆ. ಅವರು ಈತನ ಅಭಿಪ್ರಾಯವನ್ನು ತಳ್ಳಿಹಾಕಿ ಅನುಮತಿ ಕೊಡುತ್ತಾರೆ. ಈತ ಇನ್ನಷ್ಟು ಹಾರಾಡುತ್ತಾನೆ, ಕೊಂಕು ಡೊಂಕಾಗಿ ನಡೆದುಕೊಳ್ಳುತ್ತಾನೆ"[19] ಅಂದರೆ ಇಲ್ಲಿನ ಅಸೂಯೆ ತನಗಿಂತ ಅಧಿಕಾರವರ್ಗದಲ್ಲಿ ಕೆಳಗಿರುವ ಪ್ರಾಧ್ಯಾಪಕನ ಪ್ರತಿಭೆಯ ಮೇಲೆ, ಅವನ ಕೆಲಸ ಕಾರ್ಯಗಳ ಮೇಲೆ ಇರುವುದನ್ನು ಕಾಣಬಹುದಾಗಿದೆ. ಹೀಗಾಗಿ ಅವರ ಎಲ್ಲಾ ಚಲನವಲನ, ಕೆಲಸ-ಕಾರ್ಯಗಳ ಮೇಲೆ ಬಿಗಿ ಹಿಡಿತ ತಂದು ತನ್ನ ಅಧಿಕಾರವನ್ನು ಸ್ಥಾಪಿಸಲು ಕೃತಿಯ ಉದ್ದಕ್ಕೂ ಹೆಣಗುವುದನ್ನು ನೋಡಬಹುದಾಗಿದೆ. ತನ್ನ ಉದ್ದೇಶವನ್ನು ಸಾಧಿಸಲು ತನಗೆ ಯೋಗ್ಯವಲ್ಲದ ಎಂತಹ ಕೆಲಸವನ್ನು ಮಾಡಲೂ ಇವರು ಸಿದ್ಧ.

ಪ್ರವಾಸ ಕೈಗೊಳ್ಳುವ ಸಂದರ್ಭದಲ್ಲಿ ಪ್ರಿನ್ಸಿಪಾಲ್ ತೆಗೆಯುವ ತಗಾದೆ, ಕೊಡುವ ಕಷ್ಟಗಳು ಹಲವು ರೀತಿಯವು. ಕೆಲವು ಉದಾಹರಣೆಗಳನ್ನು ನೋಡುವುದಾದರೆ, ಪ್ರವಾಸ ಕೈಗೊಳ್ಳುವ ಸಂದರ್ಭದಲ್ಲಿ ಲಗೇಜಿನ ಪ್ರಮಾಣ ಹೆಚ್ಚಾಗಿರಲು ಕಾರಣ ಅವರು ಆ ಸಂದರ್ಭದಲ್ಲಿ ಚೆನ್ನಾಗಿ ರುಚಿ ರುಚಿಯಾಗಿ ಉಂಡು ತಿಂದು ಮಜಾ ಮಾಡಲು ತೆಗೆದುಕೊಂಡು ಹೋಗುತ್ತಿರುವ ಸರಕೆ ಕಾರಣ ಎಂದು ತಿಳಿಯುತ್ತಾನೆ. ಅಷ್ಟೇ ಅಲ್ಲ "ಸಸ್ಯಶಾಸ್ತ್ರ ಇಲಾಖೆಯವರು ಕಾಡಿಗೆ ಪ್ರವಾಸ ಹೋದಾಗ ದಿನದಿನವೂ ಲಾಡು ಚಿರೋಟಿಗಳನ್ನು ತಿನ್ನುತ್ತಾರೆ. ಅದಕ್ಕೆ ಬೇಕಾಗುವ ಸಾಮಗ್ರಿಗಳನ್ನೆಲ್ಲ ಇಲ್ಲಿಂದಲೇ

ತೆಗೆದುಕೊಂಡು ಹೋಗುತ್ತಾರೆ, ಆದ್ದರಿಂದಲೇ ಅಷ್ಟೊಂದು ಲಗೇಜು" ಎಂದು ಡಂಗುರ ಹುಯಿದ. ಇದು ನನ್ನ ಕಿವಿಯನ್ನು ಮುಟ್ಟಿತು. ಇನ್ನೊಂದು ಸಲ ಅವರನ್ನು ಕಂಡಾಗ ಇದರ ವಿಷಯವನ್ನು ಪ್ರಸ್ತಾಪಿಸಿ "ಇದನ್ನೂ ಹುಡುಗರು ತಿಳಿಸಿದರೆ?" ಎಂದೆ. "ಹುಡುಗರನ್ನು ಇದನ್ನೆಲ್ಲಾ ಕೇಳುತ್ತಾರೆಯೇ? ನನಗೇನು ಸ್ವಂತಜ್ಞಾನವಿಲ್ಲವೆ? ಹೋದ ಸಲ ನೀವು ಲಗ್ಗೇಜು ಏರಿಸಿದ್ದ ಎತ್ತಿನಗಾಡಿಯನ್ನು ಪರೀಕ್ಷಿಸಿದೆ. ಅದರಲ್ಲಿ ಗೋಣಿಚೀಲಗಳ ತುಂಬ ಸಾಮಾನು ಸಂಗ್ರಹಿಸಿದಿರಿ, ಒಂದೆರಡು ಮೂಟೆಗಳನ್ನು ತಟ್ಟಿ ನೋಡಿದೆ. ಹಿಟ್ಟಿನ ಧೂಳು ಮೇಲೆದ್ದಿತು. ಸಕ್ಕರೆ ಅಲ್ಲಲ್ಲಿ ಚೆಲ್ಲಿತು. ಎಣ್ಣೆ ಡಬ್ಬಗಳನ್ನು ಭರ್ತಿಯಾಗಿಟ್ಟಿದ್ದಿರಿ, ಎರಡಕ್ಕೆ ಎರಡು ಸೇರಿದರೆ ನಾಲ್ಕು ತಾನೆ ಆಗುತ್ತದೆ" ಎಂಥ ಸುಜ್ಞಾನ, ಎಂಥ ಸಂಶೋಧನೆ! ಪಿಕ್‌ನಿಕ್ ಕೂಡ ತನ್ನ ಮೇಲಾಧಿಕಾರಿಯ ಎದುರಿನಲ್ಲಿ ಶರಣು ಹೊಡೆಯಬೇಕಾದದ್ದೇ! ತಲೆ ಚಚ್ಚಿಕೊಂಡು ಸುಮ್ಮನಾದೆ"[20] ಇಂತಹ ಕ್ಷುಲ್ಲಕ ವಿಷಯಗಳನ್ನೆತ್ತಿಕೊಂಡು ಆರೋಪ ಮಾಡಿ ತನ್ನ ಸ್ಥಾನದ ಗೌರವವನ್ನು ಕಡಿಮೆ ಮಾಡಿಕೊಳ್ಳುವ ಪ್ರಿನ್ಸಿಪಾಲನ ಮೂರ್ಖತನದ ಅತಿರೇಕತೆ ನಮಗೆ ತಿಳಿಯುವುದು 'ಗಾರ್ದಭೋಪಾಖ್ಯಾನ'ದ ಸಂದರ್ಭದಲ್ಲಿ.

ಗಾರ್ದಭೋಪಾಖ್ಯಾನಕ್ಕೆ ಮುನ್ನುಡಿಯಿಟ್ಟವನು ಪ್ರಿನ್ಸಿಪಾಲನೇ. ಪ್ರವಾಸದ ಸಂದರ್ಭದಲ್ಲಿ ಕೂಲಿಯಾಳುಗಳಿಗೆ ಅನವಶ್ಯಕವಾಗಿ ಹೆಚ್ಚು ಕೂಲಿಯನ್ನು ಕೊಟ್ಟು ವೆಚ್ಚ ಮಾಡುತ್ತಿದ್ದಾರೆ ಎಂದು ತಗಾದೆ ತೆಗೆಯುತ್ತಾರೆ. ಈ ರೀತಿಯ ಆರೋಪ ತೀವ್ರವಾದಾಗ ಪ್ರಿನ್ಸಿಪಾಲನ ಈ ಆರೋಪಕ್ಕೆ ಪ್ರತಿಯಾಗಿ ಸ್ವಾಮಿಯವರು ಒಂದು ಜೊತೆ ಕತ್ತೆಗಳನ್ನು ಕೊಂಡರೆ ದಿನಗೂಲಿಯ ಬಾಧೆಯಿರುವುದಿಲ್ಲ ಎಂದು ಹೇಳಿದ್ದನ್ನೇ ಬರವಣಿಗೆಯ ಮೂಲಕ ಅವರಿಂದ ತೆಗೆದುಕೊಂಡು ತಾನು ಕೈ ಹಾಕಿರುವ ಕೆಲಸದ ಪೂರ್ವಾಪರಗಳ ಯೋಚನೆಯನ್ನು ಮಾಡದೆ ಅದಕ್ಕೆ ಅನುಮೋದಿಸುವ ಪ್ರಾಂಶುಪಾಲನ ನಿರ್ಧಾರವು ಹಾಸ್ಯಾಸ್ಪದವಾದುದಾಗಿದೆ. ಯಾವುದೇ ರೀತಿಯ ನಿರ್ದಿಷ್ಟ ಯೋಜನೆಯಿಲ್ಲದ ಈ ಪ್ರಕರಣವು ಇತರ ಇಲಾಖೆಯ ಮಂದಿಗೆ ಮೊದಲಿಗೆ ಅಚ್ಚರಿ ಮೂಡಿಸಿದರೂ ತದನಂತರದಲ್ಲಿ ಉಚಿತ ಮನರಂಜನೆಯಾಗುತ್ತದೆ. "ಗಾರ್ದಭಪುರಾಣ ಬಹಳ ಸ್ವಾರಸ್ಯವಾದ ರೀತಿಯಲಿ ಬೆಳೆಯುತ್ತಿದ್ದುದರಿಂದ ಅದರ ವಿಷಯದಲ್ಲಿ ಅನೇಕರಿಗೆ ಕುತೂಹಲ ಉಂಟಾಗಿ ಮುಂದಿನ ಬೆಳವಣಿಗೆಗೆ ಆಸರೆ ಕೊಡುತ್ತಿದ್ದರೇ ಹೊರತು ಮುಕ್ತಾಯಗೊಳಿಸುವ ಪರಿಹಾರವನ್ನು ಯಾರೂ ಕೊಡಲಿಲ್ಲ. ಎಲ್ಲರೂ ಕುಚೇಷ್ಟೆಯ ಹವನಕ್ಕೆ ತುಪ್ಪ ಒದಗಿಸುವವರೇ".[21] ಆದ್ದರಿಂದ ಇದು ಮುಂದುವರಿಯುತ್ತಾ ಹೋಗುತ್ತದೆ. ಆದರೆ ಇದರ ಬಗೆಗೆ ಯಾವುದೇ ಸರಿಯಾದ ಯೋಜನೆ ರೂಪಿಸದೆ ನಿರ್ಧಾರ ಕೈಗೊಂಡಿದ್ದರಿಂದ ಹಲವು ಅನಿರೀಕ್ಷಿತ ಸಮಸ್ಯೆಗಳು ಎದುರಾಗಿ ಗೊಂದಲದ ವಾತಾವರಣವೊಂದು ನಿರ್ಮಾಣವಾಗುತ್ತದೆ. ಇದರಿಂದ ಹೊರಬರಲು ದಾರಿ ಕಾಣದೆ ಪ್ರಿನ್ಸಿಪಾಲನು ಉದ್ರೇಕಗೊಳ್ಳುತ್ತಾನೆ. ಚಿತ್ರಗುಪ್ತನೂ ತನ್ನ ತಂತ್ರಗಳು ತನ್ನ ಹಿಡಿತದಿಂದ ತಪ್ಪಿಸಿಕೊಳ್ಳುತ್ತಿದ್ದುದನ್ನು ಕಂಡು ಕಂಗೆಡುತ್ತಾನೆ. ಕೃತಿಯ ಕೊನೆಯಲ್ಲಿ ಜರುಗುವ

ಅನಿರೀಕ್ಷಿತ ಘಟನೆಗಳಿಗೆ ಈ ಗಾರ್ದಭ ಪುರಾಣವೇ ಕಾರಣವಾಗುತ್ತದೆ. ಆ ಸನ್ನಿವೇಶದ ವಿವರ ನೀಡುತ್ತ ಸ್ವಾಮಿಯವರು "ನಮ್ಮ ಪ್ರವಾಸವನ್ನು ಅರ್ಧದಲ್ಲೇ ಮೊಟಕುಮಾಡಬೇಕಾಗಿ ಬಂದ ಪ್ರಸಂಗದಿಂದ ಕೋಪಗೊಂಡಿದ್ದೆ. ಈಗ ವಿಪರೀತ ನಗು ಬಂತು"[22] ಎನ್ನುತ್ತಾರೆ. ಅದಕ್ಕೆ ಕಾರಣ "ಅಗಸನನ್ನೂ ಕತೆಯನ್ನೂ ಒಂದೇ ರೂಮಿನಲ್ಲಿ ಸೆರೆಯಿಟ್ಟಿದ್ದಾರಂತೆ, ಪೋಲೀಸ್‌ಸ್ಟೇಷನಲ್ಲಿ ಅದೇನೋ ವಿಚಾರಣೆಯಾಗಬೇಕು ಎನ್ನುತ್ತಿದ್ದರು". ನನಗಿನ್ನಷ್ಟು ನಗು ಬಂತು... ಕಾಲೇಜಿಗೆ ಬಂದೆ"[23] ಸ್ವಾಮಿಯವರು ಈ ಪ್ರಕರಣದ ಉದ್ದಕ್ಕೂ ಕೇಳುವ ಪ್ರಶ್ನೆಗಳು, ನೀಡುವ ಅಹವಾಲು, ನಗು ಎಲ್ಲವೂ ಅಧಿಕಾರಿಶಾಹಿವರ್ಗದ ಅಧಿಕಾರ ರೀತಿಯನ್ನು ಕಂಡು ವಿಡಂಬಿಸುವ ರೀತಿಯೇ ಆಗಿದೆ. ಇವರು ನೀಡುವ ಮಾಹಿತಿಗಳ ಪ್ರಕಾರ ವಿದ್ಯಾರ್ಥಿಗಳ ಬಗ್ಗೆಯಾಗಲೀ, ಅವರ ವಿದ್ಯಾಭ್ಯಾಸ, ಪ್ರವಾಸದ ಬಗ್ಗೆಯಾಗಲಿ ಇರದ ಕಾಳಜಿ, ಉತ್ಸಾಹ ಕ್ರಿಯಾಶೀಲ ವ್ಯಕ್ತಿಗಳನ್ನು ಯಾವುದಾದರೊಂದು ಘಟನೆಯಿಂದ ಪೀಡಿಸುವ, ಅವರ ಎಲ್ಲಾ ಕಾರ್ಯಗಳನ್ನು ನಿಯಂತ್ರಣದಲ್ಲಿಡುವ ತಮ್ಮ ಅಧಿಕಾರದ ದರ್ಪವನ್ನು ಮೆರೆಯುವ ರೀತಿಯಲ್ಲೇ ಮುಂದುವರಿಯುತ್ತದೆ. ಇದು ಎಂದೋ ನಡೆದಿರಬಹುದಾದ ಘಟನೆಯೆನ್ನುವುದಕ್ಕಿಂತ ಇಂದಿಗೂ ನಡೆಯುತ್ತಿರುವ ಹಲವು ಘಟನೆಗಳಿಗೆ ಒಂದು ಸಣ್ಣ ಉದಾಹರಣೆಯಾದಷ್ಟೇ ನಿಲ್ಲುತ್ತದೆ. ಹಾಗೆಯೇ ನಮ್ಮ ಆಡಳಿತ ವ್ಯವಸ್ಥೆಯ ಅಧಿಕಾರಿಗಳ ಅಧಿಕಾರದ ದುರ್ಬಳಕೆಯನ್ನು ಹುಳುಕನ್ನು ಎತ್ತಿ ತೋರಿಸುತ್ತದೆ.

ಬಿ.ಜಿ.ಎಲ್.ಸ್ವಾಮಿಯವರ 'ಪರಿಸರ'ದ ಪರಿಕಲ್ಪನೆಯು ವ್ಯಷ್ಟಿಯಿಂದ ಸಮಷ್ಟಿಯೆಡೆಗೆ ಹೋಗುವುದನ್ನು ನೋಡಬಹುದಾಗಿದೆ. ಸಸ್ಯಗಳ ಅಧ್ಯಯನ ಸಂದರ್ಭದಲ್ಲಿ ಉಂಟಾದ ಹಲವು ಅನುಭವಗಳನ್ನು ಕುರಿತು ವಿವರಿಸಲು ಹೊರಟ ಸ್ವಾಮಿಯವರು ಅದರ ಜೊತೆಗೆ ಮನುಷ್ಯ ವಿನಾಶಕಾರಿ ನೆಲೆಯನ್ನು, ಭ್ರಷ್ಟರಾಜಕಾರಣವನ್ನು, ಅಸಮರ್ಪಕ ಶಿಕ್ಷಣ ವ್ಯವಸ್ಥೆಯನ್ನು, ಬಂಡವಾಳಶಾಹಿ ವ್ಯವಸ್ಥೆಯ ದೌರ್ಜನ್ಯವನ್ನು ಹೀಗೆ ಹಲವು ವಿಚಾರಗಳನ್ನು ಕುರಿತು ಚರ್ಚಿಸುತ್ತಾ ಅವುಗಳನ್ನು ಹಲವು ನಿದರ್ಶನಗಳ ಮೂಲಕ ಸಾಬೀತುಗೊಳಿಸುತ್ತಾ ಮುನ್ನಡೆಯುವುದನ್ನು ನೋಡಬಹುದಾಗಿದೆ.

**ಅಡಿ ಟಿಪ್ಪಣಿಗಳು**

1. ನೆಲಮುಟ್ಟುವ ಪ್ರೀತಿ, ವಿ.ಚಂದ್ರಶೇಖರ ನಂಗಲಿ, ಮುದ್ದುಶ್ರೀ ಗ್ರಂಥಮಾಲೆ, ಪುಟಸಂಖ್ಯೆ–130
2. ಹಸಿರು ಹೊನ್ನು, ಬಿ.ಜಿ.ಎಲ್.ಸ್ವಾಮಿ; ಕಾವ್ಯಾಲಯ, ಪುಟಸಂಖ್ಯೆ–72
3. ಅದೇ, ಪುಟ–
4. ಅದೇ, ಪುಟ – 183
5. ಅದೇ, ಪುಟ – 188
6. ಅದೇ, ಪುಟ – 188
7. ಅದೇ, ಪುಟ – 163
8. ಅದೇ, ಪುಟ – 163
9. ಅದೇ, ಪುಟ – 214
10. ಅದೇ, ಪುಟ – 214
11. ಅದೇ, ಪುಟ – 193
12. ಅದೇ, ಪುಟ –85
13. ಅದೇ, ಪುಟ – 275
14. ಅದೇ, ಪುಟ – 45
15. ಅದೇ, ಪುಟ – 46
16. ಅದೇ, ಪುಟ – 83
17. ನೆಲಮುಟ್ಟುವ ಪ್ರೀತಿ, ವಿ.ಚಂದ್ರಶೇಖರ ನಂಗಲಿ; ಮುದ್ದುಶ್ರೀ ಗ್ರಂಥಮಾಲೆ, ಪುಟಸಂಖ್ಯೆ–133
18. ಹಸಿರುಹೊನ್ನು – ಬಿ.ಜಿ.ಎಲ್.ಸ್ವಾಮಿ, ಕಾವ್ಯಾಲಯ, ಪುಟಸಂಖ್ಯೆ –126
19. ಅದೇ, ಪುಟ – 2
20. ಅದೇ, ಪುಟ – 6
21. ಅದೇ, ಪುಟ – 315
22. ಅದೇ, ಪುಟ – 397
23. ಅದೇ, ಪುಟ –397

# ಅಧ್ಯಾಯ – 5

## ಸಮಕಾಲೀನ ಸಂದರ್ಭಕ್ಕೆ ತೇಜಸ್ವಿ ಮತ್ತು ಬಿ.ಜಿ.ಎಲ್.ಸ್ವಾಮಿಯವರ ಚಿಂತನೆಗಳ ಕೊಡುಗೆಗಳು

ಕನ್ನಡ ಸಾಹಿತ್ಯದಲ್ಲೇ 'ಪರಿಸರ'ದ ಬಗೆಗಿನ ಆಳವಾದ, ವ್ಯಾಪಕವಾದ ಚಿಂತನೆ ನಡೆಸಿದವರಲ್ಲಿ ಬಿ.ಜಿ.ಎಲ್.ಸ್ವಾಮಿ ಮತ್ತು ಪೂರ್ಣಚಂದ್ರತೇಜಸ್ವಿಯವರು ಮುಖ್ಯರಾಗುತ್ತಾರೆ. ವಿಜ್ಞಾನದ ಬಗೆಗೆ ಇವರಿಗಿದ್ದ ಅರಿವು ಮತ್ತು ತಾವು ಪಡೆದ ಹಲವಾರು ಅನುಭವಗಳ ಹಿನ್ನೆಲೆಯಲ್ಲಿ ಇವರ ಪರಿಸರದ ಬಗೆಗಿನ ಕೃತಿಗಳು ರೂಪುಗೊಂಡಿವೆ. ಪರಿಸರದ ಪ್ರತಿಯೊಂದು ಅಂಶದಲ್ಲಿಯೂ ನಿಗೂಢತೆಯನ್ನು, ಸೃಷ್ಟಿವೈಚಿತ್ರ್ಯವನ್ನು ಕಂಡು ಬೆರಗಾಗಿ ಶರಣಾಗುವ ಈ ಲೇಖಕರು ಅದೇ ಪರಿಸರವು ತಮ್ಮ ಇರುವಿಕೆಯ ಅವಧಿಯಲ್ಲಿ ಪಡೆದಿರುವ ಅವಸ್ಥಾಂತರಗಳನ್ನು ಗುರುತಿಸುತ್ತಾರೆ. ಮನುಷ್ಯ ಎನ್ನುವ ಪ್ರಾಣಿ ಹೇಗೆ ಇಡೀ ಪರಿಸರವನ್ನು ಕಲುಷಿತಗೊಳಿಸಿ ರೋಗಗ್ರಸ್ತವನ್ನಾಗಿ ಮಾಡುತ್ತಿದ್ದಾನೆ ಎಂಬುದನ್ನು ಹಲವು ನಿದರ್ಶನಗಳ ಮೂಲಕ ಗುರುತಿಸುತ್ತಾರೆ. ಅನೇಕ ವಿಷಯಗಳಲ್ಲಿ ಇವರಿಬ್ಬರೂ ಪರಿಸರವನ್ನು ಗ್ರಹಿಸುವ, ಅರ್ಥೈಸಿಕೊಳ್ಳುವ ನೆಲೆಗಳು ಬೇರೆ ಬೇರೆಯಾದರೂ ಇಬ್ಬರಲ್ಲೂ ಕಾಣುವ ಕಾಳಜಿ, ಪ್ರೀತಿಗಳು ಒಂದೇ ಆಗಿವೆ. ಮನುಷ್ಯನ ಮಿತಿಮೀರಿದ ಆಕ್ರಮಣಕಾರಿ ನೀತಿಯು ಉಂಟು ಮಾಡುತ್ತಿರುವ ಪರಿಣಾಮಗಳು ಹೇಗೆ ಅವನಿಗೆ ಮಾರಕವಾಗಿ ಪರಿಣಮಿಸಿವೆ ಎಂಬುದನ್ನು ಮನಗಾಣಬಹುದು. ಅವನ ಸುತ್ತ ಅವನೇ ಬಲೆ ನೇಯ್ದುಕೊಂಡು ಸಿಲುಕಿದ್ದರೂ ಅದರ ಅರಿವನ್ನೇ ಪಡೆಯದೆ ಎಲ್ಲದರ ಮೇಲೂ ತನ್ನ ಅಧಿಕಾರವನ್ನು ಸ್ಥಾಪಿಸಲೆಳಸುತ್ತಿದ್ದಾನೆ. ಈ ಕೃತಿಗಳ ಪ್ರಸ್ತುತ ಸಂದರ್ಭಗಳಲ್ಲಿ ನಾವು ಎದುರಿಸುತ್ತಿರುವ ಅನೇಕ ಸಮಸ್ಯೆಗಳಿಗೆ ಕಾರಣವನ್ನು ಒದಗಿಸಿಕೊಡುತ್ತವೆ. ಜಡ್ಡುಗಟ್ಟಿರುವ ಜೀವನವನ್ನು, ಅಧಿಕಾರಶಾಹಿಗಳ ದಬ್ಬಾಳಿಕೆ, ದುರ್ಬಲ ಆಡಳಿತ ಕ್ರಮವನ್ನು ಇಡೀ ವ್ಯವಸ್ಥೆಯ ವಿಡಂಬನೆಯನ್ನು ತೀಕ್ಷ್ಣವಾಗಿ ವಿವೇಚಿಸಲಾಗಿದೆ. ಇವರಿಬ್ಬರ ಯೋಚನಾಕ್ರಮದಲ್ಲಿ ಹಲವು ವೇಳೆ ಸಾಮ್ಯತೆಯನ್ನು ಕಾಣಬಹುದು.

ಬಿ.ಜಿ.ಎಲ್.ಸ್ವಾಮಿ ಚಿತ್ರಿಸಿರುವ ವೆಳತ್ತಪಿಳ್ಳೈ, ಮರುಂದು, ಗಿಡ್ಡನಾಯಕ, ತೇಜಸ್ವಿಯವರ ಚೇಂಕ್ರಮೇಸ್ತ್ರಿ, ಮಂದಣ್ಣ, ಕರಿಯಪ್ಪ, ವೆಂಕಟ ಇವರುಗಳು ಸ್ಥಳೀಯ ಭೂಗೋಳದಲ್ಲಿ ಹೆಸರು ಮಾಡಿಲ್ಲದ, ಗೌಣವಾಗಿರುವ ಆದರೆ ಕಾಡಿನ ಪರಿಸರದ ಬಗೆಗೆ ಅಪಾರ ಅರಿವು ಹೊಂದಿರುವ ಪಾತ್ರಗಳಾಗಿವೆ. ನಗರದ ವಿಜ್ಞಾನಿ, ಸಂಶೋಧಕರಿಗೆ ಆಶ್ಚರ್ಯವೆನಿಸುವ ಸಂಗತಿಗಳೆಲ್ಲ ಇವರಿಗೆ ಸಾಮಾನ್ಯವಾದವು. ನಿತ್ಯಜೀವನದ ಆಗು–ಹೋಗುಗಳ ರೀತಿಯಲ್ಲೇ ಅವುಗಳನ್ನು ನೋಡಿ

ಸುಮ್ಮನಾಗುತ್ತಾರೆಯೇ ಹೊರತು ಅವುಗಳನ್ನು ತಮ್ಮ ಉಪಯೋಗಕ್ಕೆ ಬಳಸಿಕೊಂಡು ಲಾಭ ಮಾಡಿಕೊಳ್ಳುವ ಮನಸ್ಸು ಇವರುಗಳಿಗಿಲ್ಲ. ಪ್ರತ್ಯೇಕವಾಗಿ ಇವರುಗಳ ಜೀವನಶೈಲಿಯನ್ನು, ಯೋಚನಾಕ್ರಮವನ್ನು ಅವರ ಜ್ಞಾನವನ್ನು ತಿಳಿದಾಗಲೇ ಈ ಪಾತ್ರಗಳ ಪ್ರಾಮುಖ್ಯತೆ ನಮಗೆ ತಿಳಿಯುವುದು ಹಾಗೂ ಈ ಪಾತ್ರಗಳ ಸೃಷ್ಟಿಯ ಹಿಂದಿರುವ ಲೇಖಕರ ಮನೋಧರ್ಮದ ಅರಿವಾಗುವುದು.

ಬಿ.ಜಿ.ಎಲ್.ಸ್ವಾಮಿಯವರ 'ಹಸುರುಹೊನ್ನು' ಕೃತಿಯಲ್ಲಿ ಬರುವ ವೆಳತ್ತಪಿಳ್ಳೆ, ಮರುಂದು, ಗಿಡ್ಡನಾಯಕರು ಎಷ್ಟು ನೈಜ ಪ್ರತಿಭೆಗಳೆನ್ನುವುದನ್ನು ತಿಳಿಯುವುದಾದರೆ, ಮೊದಲಿಗೆ ವೆಳತ್ತಪಿಳ್ಳೆ ಈತ ಕಾಡಿನಲ್ಲಿ ಜೀವಿಸುತ್ತಿರುವ ಇತರ ಪ್ರಾಣಿಗಳಂತೆ ಸ್ವತಂತ್ರವಾಗಿ ಬದುಕುತ್ತಿರುವವ, ಮರ ಹತ್ತುವ ಕೆಲಸಕ್ಕಾಗಿ ಗಾರ್ಡು ಕಾಡಿನಲ್ಲೇ ಓಡುತ್ತಿದ್ದ ಈತನನ್ನು ಕರೆದುಕೊಂಡು ಬರುತ್ತಾರೆ. ನಾಲ್ಕುವರೆ ಅಡಿ ಉದ್ದದ, ಗಟ್ಟಿಮುಟ್ಟಾದ ಸುಮಾರು 20 ವರ್ಷದ ಪ್ರಾಯದ ಹುಡುಗ ಇವನು. ಕಾಡಿನ ಪ್ರತಿಯೊಂದು ದಾರಿಗಳಂತೆ, ಮರಗಳು ಇವನಿಗೆ ಚಿರಪರಿಚಿತ. ಜೇನು ಹಿಂಡುವುದರಲ್ಲಿ, ಮರ ಹತ್ತುವುದರಲ್ಲಿ, ಅವುಗಳ ಉಪಯೋಗವನ್ನು ಪಡೆಯುವುದರಲ್ಲಿ, ಅಲ್ಲಿನ ಪ್ರತಿಯೊಂದು ವಸ್ತುಗಳನ್ನು ಬಳಸಿಕೊಂಡು ಜೀವಿಸುವುದರಲ್ಲಿ ಇವನಿಗೆ ಯಾವುದೇ ಗೊಂದಲವಿಲ್ಲ. ಆದರೆ ನಗರದ ಜನರನ್ನು ಮಾತನಾಡಿಸುವ ಗೋಜಿಗೆ ಹೋಗದ ಇವನ ವರ್ತನೆಗಳು ವಿಚಿತ್ರವೆನಿಸುವ ಹಾಗೆ ಗೌರವವನ್ನು ಮೂಡಿಸುತ್ತದೆ. ಇವನಿಂದ ಕೆಲಸ ತೆಗೆಯಲು ಹುಡುಗರು ಮಾಡುವ ಪ್ರಯತ್ನಗಳು ಹಲವಾರು, ಚಿದಂಬರ ಅವನಿಗೆ ಆಸೆ ತೋರಿಸುವ ನಿಟ್ಟಿನಲ್ಲಿ ಹೇಳುವ ಮಾತು ಆತನಲ್ಲಿ ಆತಂಕ ಮೂಡಿಸುತ್ತದೆ. "ನೀನು ಸಮರ್ಪಕವಾಗಿ ಕೆಲಸ ಮಾಡಿದೆಯಾದರೆ ನಿನ್ನನ್ನು ಮದರಾಸಿಗೆ ಕರೆದುಕೊಂಡು ಹೋಗುತ್ತೇವೆ, ಅಲ್ಲಿ ನಿನಗೆ ಕ್ರಾಪು ಮಾಡಿಸುತ್ತೇವೆ, ಅಲ್ಲಿಯೇ ಒಂದು ಕೆಲಸವನ್ನು ಕೊಡಿಸುತ್ತೇವೆ"[1] ಎಂದ ತಕ್ಷಣ ಅವರಿಂದ ತಪ್ಪಿಸಿಕೊಳ್ಳಲು ಹವಣಿಸುತ್ತಾನೆ. ಸ್ವಾಮಿಯವರು ಇದಕ್ಕೆ ಕಾರಣವನ್ನು ಕೊಡುತ್ತ "ಕುರುಂಬ ಹೆದರಿಕೊಂಡಿದ್ದ, ತನ್ನ ಒಕ್ಕಲಾದ ಕಾಡಿಂದ ಊರಿಗೆ ಹೋಗುವುದೆಂದರೆ ಅವನಿಗೆ ಭಯ. ಅವನಿಗೆ ಬೇರೆ ಕೆಲಸವಾವುದೂ ಬೇಡ, ತಾನಿದ್ದಲ್ಲಿಯೇ ತನ್ನ ಜೀವಮಾನ ಕಳೆಯಬೇಕು, ಇನ್ನೊಬ್ಬರ ಹಂಗಿಲ್ಲದೆ ಪ್ರಕೃತಿಯ ಮಡಿಲಿನಲ್ಲಿಯೇ ಅವನಿರಬೇಕು"[2] ಹೀಗೆ ಪ್ರಕೃತಿಯ ಶಿಶುವಾಗಿ ಇರುವುದರಲ್ಲಿಯೇ ವೆಳತ್ತಪಿಳ್ಳೆಗೆ ಸಂತೋಷ. ತೇಜಸ್ವಿಯವರ 'ಕರ್ವಾಲೋ'ನಲ್ಲಿನ ಮಂದಣ್ಣನಿಗಿಂತ ವೆಳತ್ತಪಿಳ್ಳೆಯೇ ಕಾಡಿನ ಪರಿಸರಕ್ಕೆ ಹೆಚ್ಚು ಹತ್ತಿರವಿರುವುದನ್ನು ಗುರುತಿಸಬಹುದು. ಏಕೆಂದರೆ ಮಂದಣ್ಣನಿಗೆ ತಾನು ಬದುಕುತ್ತಿರುವ ಜೀವನವನ್ನು ಇನ್ನಷ್ಟು ಉತ್ತಮಪಡಿಸಿಕೊಳ್ಳಲು ಆಸೆ ಇದೆ. ಅದೇ ಕಾರಣದಿಂದ ತನ್ನ 'ಗುರು ವಿಜ್ಞಾನಿ ಕರ್ವಾಲೋ ಜೊತೆಗೆ ಅತಿ ನಿಕಟ ಸಂಬಂಧವಿರಿಸಿಕೊಂಡಿದ್ದವನು. ಕರ್ವಾಲೋ ತಮ್ಮ ಕಚೇರಿಯಲ್ಲಿ ಒಂದು ಜವಾನನ ಹುದ್ದೆಯನ್ನು ತನಗೆ ಕೊಟ್ಟಿಲ್ಲವೆಂಬ ಕಾರಣಕ್ಕೆ

ಒಂದಷ್ಟು ದಿನಗಳ ಕಾಲ ಅವರ ಜತೆಗಿನ ಒಡನಾಟವನ್ನೇ ಬಿಡುತ್ತಾನೆ. ಅವನು ಕೂಡ ವೆಳತ್ತಪಿಳ್ಳೆನಂತಹ ನೈಜ ಪ್ರತಿಭೆಯಾಗಿ ಕಂಡರೂ ಕೂಡ ವೆಳತ್ತಪಿಳ್ಳೆಯಲ್ಲಿ ಕಾಣುವ ನಿಸ್ವಾರ್ಥತೆ, ಕಾಡಿನ ಬದುಕಿನಲ್ಲಿಯೇ ಕಾಣುವ ಸಾರ್ಥಕತೆಯನ್ನು ಮಂದಣ್ಣನಲ್ಲಿ ಕಾಣಲಾಗದು.

ವೆಳತ್ತಪಿಳ್ಳೆಯ ಪ್ರತಿಯೊಂದು ಕೆಲಸಕಾರ್ಯವು ಅಲ್ಲಿದ್ದವರಿಗೆ ಕುತೂಹಲ, ಆಶ್ಚರ್ಯವನ್ನು ಮೂಡಿಸುವಂತಹದ್ದೇ. ಜೇನು ಹಿಡಿಯುವಾಗ ಅನುಸರಿಸುವ ಕ್ರಮವಂತೂ ಎಲ್ಲರನ್ನು ಆಶ್ಚರ್ಯಗೊಳಿಸುತ್ತದೆ. ಇದಕ್ಕಿಂತ ಎಲ್ಲರನ್ನೂ ಮೂಕಚಕಿತರನ್ನಾಗಿ ಮಾಡಿ ತನ್ನ ಸಾಮರ್ಥ್ಯದ ಅರಿವು ಮೂಡಿಸುವುದು ಸಟ್ಟಗ ಮರವನ್ನು ಹತ್ತುವ ಸಂದರ್ಭದಲ್ಲಿ. ಆ ಕಾಡಿನಲ್ಲಿ ಇರಬಹುದಾದ ಅತೀ ದೊಡ್ಡ ಮರಗಳಲ್ಲಿ ಇದು ಕೂಡ ಒಂದು. ನೆಲದಿಂದ 80–90ಅಡಿ ಎತ್ತರದ ರೆಂಬೆ–ಕೊಂಬೆಗಳಿಲ್ಲದ ಕಾಂಡ; ಬುಡದಲ್ಲಿ ಸುಮಾರು 7–8 ಅಡಿ ಅಗಲ, ಅಷ್ಟು ಎತ್ತರದ ಕಾಂಡವನ್ನು ಭದ್ರವಾಗಿ ನಿಲ್ಲಿಸುವಂತೆ ಬುಡದಿಂದ ನಾನಾ ದಿಕ್ಕುಗಳಿಗೂ ಊರೇ ಬೇರುಗಳು ಹಲಗೆಗಳಂತೆ ಹರಡಿಕೊಂಡಿವೆ. ಈ ದೃಶ್ಯ ಎಲ್ಲರಿಗೂ ಕುತೂಹಲಕಾರಿಯಾಗಿತ್ತು. ಸ್ವಾಮಿಯವರು ಸಟ್ಟಗದ ಎಲೆಯ ಭಾಗವನ್ನು ಬೈನಾಕ್ಯುಲರಿನ ಮೂಲಕ ಪರೀಕ್ಷಿಸಿದಾಗ ಹೂ ಗೊಂಚಲುಗಳು ಕಂಡವು. ವೆಳತ್ತಪಿಳ್ಳೆಯನ್ನು ಅವು ಬೇಕು ಎಂದಾಗ ಹಲ್ಕಿರಿದು ಮರ ಹತ್ತಲು ಮುಂದಾದ "ಬಲಗೈಯಲ್ಲಿ ಮಚ್ಚು ಹಿಡಿದು ಹಲಗೆ ಬೇರುಗಳನ್ನು ಹಿಡಿದುಕೊಂಡು ಹತ್ತಿ ನಿಂತ. ಅಲ್ಲಿಂದ ಎರಡು ಅಡಿ ಎತ್ತರಕ್ಕೆ ತೊಗಟೆಯನ್ನು ಬೆಣೆಯಾಕಾರದಲ್ಲಿ ಕಚ್ಚು ಮಾಡಿದ ಕಚ್ಚಿನಲ್ಲಿ ಎಡಗಾಲಿನ ಬೆರಳನ್ನು ಆನಿಕೊಂಡು ಎಡಗೈಯಿಂದ ಕಾಂಡವನ್ನು ತಬ್ಬಿಕೊಂಡು ಇನ್ನೊಂದೆರಡಡಿ ಎತ್ತರದಲ್ಲಿ ಅದೇ ರೀತಿಯ ಇನ್ನೊಂದು ಕಚ್ಚು ಮಾಡಿದ ಈಗ ಬಲಗಾಲು ಹೆಬ್ಬೆಟ್ಟನ್ನು ಇದರಲ್ಲಿ ಊರಿ ಹತ್ತಿನಿಂತು ಹೀಗೆಯೇ ಎರಡು – ಎರಡೂವರೆ ಅಡಿಗಳಿಗೊಂದು ಕಚ್ಚು ಮಾಡುತ್ತ ಹತ್ತುತ್ತ ಮೇಲ್ಕೊಂಬೆಗಳನ್ನು ಸೇರಿದ. ಹೂ ಗೊಂಚಲುಗಳನ್ನು, ಹಣ್ಣುಗಳನ್ನು ಕಿತ್ತು ನಡುವಿನಲ್ಲಿ ಸಿಕ್ಕಿಸಿಕೊಂಡ ಕಚ್ಚುಗಳಲ್ಲಿ ಪುನಃ ಕೈಕಾಲುಗಳನ್ನು ಊರಿಕೊಂಡು ನೆಲಕ್ಕಿಳಿದು, ತಂದಿದ್ದ ಸಾಮಗ್ರಿಗಳನ್ನು ನಮ್ಮ ಕೈಯಲ್ಲಿಟ್ಟು ಹಲ್ಕಿರಿದ. ವೆಳತ್ತಪಿಳ್ಳೆಯ ಸಾಹಸ ಚಾತುರ್ಯಗಳು ನಮ್ಮನ್ನು ಮೂಕರನ್ನಾಗಿ ಮಾಡಿಬಿಟ್ಟವು. ಚಿದಂಬರನಂತೂ ಕಣ್ಣುಗುಡ್ಡೆಗಳನ್ನು ಎವೆಗಳಿಂದ ಹೊರಕ್ಕೆ ದೂಡಿ ಮಂಕು ಬಡಿದವನಂತೆ ನಿಂತುಬಿಟ್ಟ, ಶಿಂಗನು ವೆಳತ್ತಪಿಳ್ಳೆಯ ಕೈಕಾಲು ಕೀಲುಗಳನ್ನು ಮುಟ್ಟಿ ಮುಟ್ಟಿ ನೋಡಿ ಆಶ್ಚರ್ಯ ಪಡುತ್ತಿದ್ದ"[3]



ಒಟ್ಟಿನಲ್ಲಿ ವೆಳತ್ತಪಿಳ್ಳೆ ಅಲ್ಲಿದ್ದವರಿಗೆಲ್ಲರಿಗೂ ತನ್ನ ಕಾರ್ಯದ ಮೂಲಕ ಆಕರ್ಷಣೀಯ ಕೇಂದ್ರವಾದ. ಎಷ್ಟರಮಟ್ಟಿಗೆ ಎಂದರೆ ಅವನು ಎಲ್ಲರಿಗೂ ಗುರುವಿನ ಸ್ಥಾನದಲ್ಲಿ ಮುಂದುವರೆದ, ಆದರೆ ಈ ಅರಿವು ಸ್ವತಹ ವೆಳತ್ತಪಿಳ್ಳೆಗೆ ಇರಲಿಲ್ಲ. ಮುಂದೆ ಸಾಗಿದಂತೆ ನೀರು ಕುಡಿಯಲು ಬಾಯಾರಿದ ಎಲ್ಲರೂ ತಿಳಿನೀರಿನ ಒಂದು ಸಣ್ಣ ಕಾಲುವೆಯನ್ನು ಮುಟ್ಟಿದರು. ನೀರು

ಕುಡಿಯಬೇಕೆಂಬ ಹಂಬಲ ಎಲ್ಲರಿಗಿದ್ದರೂ ಅದನ್ನು ಕೈಗೆ ಎಟುಕಿಸಿಕೊಳ್ಳುವುದು ಅವರಿಂದ ಸಾಧ್ಯವಾಗಲಿಲ್ಲ. ಆದರೆ ವೆಳತ್ತಪಿಳ್ಳೆ ಅಲ್ಲೇ ಕಾಲುವೆಯ ಬಳಿ ಬೆಳೆಯುತ್ತಿದ್ದ ಜೋಂಡಿನ ಕಾಂಡವನ್ನು ಕತ್ತರಿಸಿ ಎರಡುವರೆ ಅಡಿ ಉದ್ದದ ಕೊಳವೆ ಮಾಡಿಕೊಂಡು ನೀರು ಕುಡಿದನು. ಇದನ್ನೇ ಎಲ್ಲರೂ ಕೂಡ ಅನುಸರಿಸಿದರು. ಆ ಸಂದರ್ಭದಲ್ಲಿ ಶಿಂಗ ಹೇಳುವ ಮಾತು ತುಂಬ ಅರ್ಥಪೂರ್ಣವಾಗಿದೆ. ತನ್ನನ್ನು ರೇಗಿಸಿದ ಚಿದಂಬರನಿಗೆ ಉತ್ತರಿಸುತ್ತಾ "ಪಂಗ ಮುಂಡೇದೆ! ನೀನು ಬಾಟನಿ ಓದಿರುವುದು ಒಂದೇ, ವೆಳತ್ತಪಿಳ್ಳೆ ಓದದಿರುವುದು ಒಂದೇ ಈ ಜೊಂಡುಗಿಡದ ವಿಷಯವನ್ನು ಕುರಿತು ತರಗತಿಯಲ್ಲಿ ಕಲಿತಿದ್ದೇವೆ, ಪುಸ್ತಕದಲ್ಲಿ ಓದಿದ್ದೇವೆ. ಅದರ ಕಾಂಡದಲ್ಲಿ ನಳಿಗೆಯಿದೆ ಎಂಬುದನ್ನು ಅರಿತಿದ್ದೇವೆ. ನಳಿಗೆಯ ಮೂಲಕ ನೀರನ್ನು ದ್ರವಗಳನ್ನು ಹೀರಬೇಕೆಂಬುದನ್ನು ತಿಳಿದಿದ್ದೇವೆ; ಸ್ಟ್ರಾ (Straw) ಮೂಲಕ ತಂಪು ಪಾನೀಯಗಳನ್ನು ಹೀರಿ ಕುಡಿದಿದ್ದೇವೆ. ಈಗ ಈ ಗಿಡವನ್ನು ಪ್ರತ್ಯಕ್ಷವಾಗಿ ಕಂಡಿದ್ದೇವೆ; ಹರಿಯುವ ನೀರನ್ನು ಬಾಯಿಗೆ ದಕ್ಕಿಸಿಕೊಳ್ಳಲಾರದೆ ಹೆಣಗಾಡುತ್ತಿದ್ದೇವೆ. ಓದಿದ್ದು, ಅನುಭವಿಸಿದ್ದು ನಮಗೆ ನೆರವಾಗದೇ ಹೋಯಿತು! ವೆಳತ್ತಪಿಳ್ಳೆಯೇ ನಮಗೆ ಗುರುವಿನಂತಾದ!"[4] ಎಂದು ಸಣ್ಣ ಉಪನ್ಯಾಸವೊಂದನ್ನು ನೀಡುತ್ತಾನೆ. ಅದು ಬಿ.ಜಿ.ಎಲ್.ಸ್ವಾಮಿಯವರ ಅಭಿಪ್ರಾಯವನ್ನು ಹೇಳಿದಂತಿತ್ತು ಎನ್ನಬಹುದು. ಏಕೆಂದರೆ ಅವರ ವಿವರಣೆ ಹೀಗಿದೆ. "ಶಿಂಗ ವೆಳತ್ತಪಿಳ್ಳೆಯನ್ನು ಗುರುವೆಂದು ಭಾವಿಸಿದ್ದರಲ್ಲಿಯೂ ಔಚಿತ್ಯವಿದೆ. ಗಿಡಮರಗಳನ್ನು ನಮ್ಮ ಹೊಸ ಹೊಸ ಉಪಯೋಗಗಳಿಗಾಗಿ ಬಳಸಿಕೊಳ್ಳಬೇಕೆಂದಿರುವವರೆಲ್ಲರೂ ವೆಳತ್ತಪಿಳ್ಳೆಯಂತಹ 'ಕಾಡುಜನ'ರನ್ನು ಗುರುಸ್ಥಾನದಲ್ಲಿಡಬೇಕಾದ ಕಾಲ ಇನ್ನು ತೀರಿಲ್ಲ. ಇಂದಿಗೂ ನಮ್ಮ ರೋಗ ರುಜಿನಗಳಿಗೆ ಸಲ್ಲುವ ಔಷಧಿಗಳಲ್ಲಿ ಶೇಕಡ 80 ಪಾಲು ಸಸ್ಯವರ್ಗದಿಂದ ಬಂದವೇ ಆಗಿವೆ. ಈಗ ಪ್ರಚಾರದಲ್ಲಿರುವ ಔಷಧಗಳಿಗಿಂತಲೂ ಉತ್ತಮವಾಗಿರುವಂತಹುಗಳು. ವರ್ಷ ವರ್ಷವೂ ಹೊಸ ಹೊಸತಾಗಿ ಬಳಕೆಗೆ ಬರುತ್ತಿವೆ. ಈ ಔಷಧಿಗಳಿಗೆ ಮಾತೃಕೆಗಳಾದ ಗಿಡಗಳು ದಕ್ಷಿಣ ಅಮೇರಿಕಾದ ಕಾಡುಗಳಿಂದಲೂ ಆಫ್ರಿಕಾದ ಅರಣ್ಯದಿಂದಲೂ ಸಂಪಾದಿತವಾಗಿವೆ. ಆ ಗಿಡಮರಗಳ ಮೊದಲಿನ ಉಪಯೋಗಗಳನ್ನು ಕಂಡುಕೊಂಡವರು ಆಯಾ ಕಾಡುಗಳ ಮೂಲನಿವಾಸಿಗಳೇ; ತಲೆತಲಾಂತರದಿಂದ ಅವರಲ್ಲಿ ಬಳಕೆಗೆ ಬಂದಿರುವ ಉಪಯೋಗಗಳನ್ನು ಅವರಿಂದ ಈಚಿನ ವಿಜ್ಞಾನಿಗಳು ಅರಿತುಕೊಂಡು, ಆಯಾ ಗಿಡಿಗಳ ಸಂಗ್ರಹಕ್ಕಾಗಿ ತನುಮನಧನಗಳನ್ನು ವ್ಯಯಿಸಿ ಅಂತ ಗಿಡ ಸಾಮಗ್ರಿಗಳನ್ನು ಸಂಶೋಧನೆಗಾಗಿ ಒದಗಿಸಿಕೊಳ್ಳುತ್ತಿದ್ದಾರೆ"[5] ಎಂದು ಅಭಿಪ್ರಾಯ ಪಡುವುದರ ಮೂಲಕ ವೆಳತ್ತಪಿಳ್ಳೆಯಂತಹ ಜನರ ಅವಶ್ಯಕತೆಯನ್ನು ವಿವರಿಸುತ್ತಾರೆ.

ಮುಂದೆ ಸಸ್ಯ ಸಂಗ್ರಹಣವನ್ನು ಮುಖ್ಯವಾಗಿ ವೈದ್ಯಕೀಯ ಮೂಲಿಕೆಗಳ ದೃಷ್ಟಿಯಿಂದ ಮಾಡಬೇಕಾಗುದರಿಂದ ವೆಳತ್ತಪಿಳ್ಳೆಯ ಸಹಾಯ ಕೋರಲು ಹಲವು ಆಮಿಷಗಳನ್ನು ಒಡ್ಡುತ್ತಾರೆ.

"ಚಿದಂಬರ ಅವನಿಗೊಂದು ಷರಾಯಿಕೊಟ್ಟ, ವೆಂಬುಲಿ, ಟೆರಿಲಿನ್ ಷರಟು ಕೊಟ್ಟ, ಕಂದಯ್ಯ ಹತ್ತು ರೂಪಾಯಿ ಕೊಟ್ಟರು. ವೆಳತ್ತಪಿಳ್ಳೆ ಷರಾಯಿಯನ್ನು ತಿರುಗಿಸಿ ತಿರುಗಿಸಿ ನೋಡಿ ಕಾಲುಹೋಗುವ ಎಡೆಯಲ್ಲಿ ತಲೆಯನ್ನು ತೂರಿಸಲು ಪ್ರಯತ್ನಪಟ್ಟ. ಹುಡುಗಿಯರು ನಕ್ಕಾಗ ಷರಾಯಿಯನ್ನು ಚಿದಂಬರನಿಗೆ ಕೊಟ್ಟುಬಿಟ್ಟ. ಹತ್ತು ರೂಪಾಯಿ ನೋಟನ್ನು ಪರೀಕ್ಷೆ ಮಾಡಿ ಅದನ್ನು ಕಂದಯ್ಯನಿಗೆ ಕೊಟ್ಟುಬಿಟ್ಟ. ಅವನಿಗೆ ನೋಟಿನ ಬೆಲೆ ತಿಳಿಯಲಿಲ್ಲವೋ ಏನೋ ಎಂದು ಅದೇ ಬೆಲೆಯ ಬೆಳ್ಳಿಯ ರೂಪಾಯಿಗಳನ್ನು ಕೊಟ್ಟಾಗ ಎಳೆಯ ಮಗುವಿನಂತೆ ಅದರೊಂದಿಗೆ ಆಟವಾಡಿ ಎರಡನ್ನು ಮಾತ್ರ ಇಟ್ಟುಕೊಂಡು ಉಳಿದಿದ್ದನ್ನು ವಾಪಾಸುಕೊಟ್ಟ. ನಮ್ಮ ದೃಷ್ಟಿಯಲ್ಲಿ ಬೆಲೆ ಬಾಳುವ ವಸ್ತುಗಳು ಅವನಿಗೆ ಬೇಕಿರಲಿಲ್ಲ. ಅಥವಾ ಅವುಗಳ ಬೆಲೆ ಅವನಿಗೆ ತಿಳಿಯಲಿಲ್ಲ" ಎಂಬ ಮಾತುಗಳು ಅವನಲ್ಲಿನ ಮುಗ್ಧತೆಯನ್ನು ತೋರಿಸುತ್ತದೆ. ಹಾಗೆಯೇ ಕಾಡಿನಲ್ಲಿನ ವನಸಂಪತ್ತಿನ ಬಗ್ಗೆ ಎಷ್ಟೇ ಉಪಯೋಗಗಳು ತಿಳಿದಿದ್ದರೂ ಕೂಡ ನಗರದ ಜನರಲ್ಲಿನ ಸ್ವಾರ್ಥ, ಲಾಭಕಾಂಕ್ಷೆಯೂ ಇವನಿಗಿಲ್ಲ. ಬೇರೆಯವರಿಗೆ ಸಹಾಯ ಮಾಡುವ ಮನೋಭಾವವಿದೆಯೇ ಹೊರತು ಅದಕ್ಕೆ ಪ್ರತಿಫಲ ಪಡೆಯಬೇಕೆಂಬ ಮನಸ್ಸು ಇಲ್ಲ. ಈ ರೀತಿಯ ಪಾತ್ರವನ್ನು ಗುರುತಿಸುವುದರ ಹಿಂದಿರುವ ಲೇಖಕನ ಮನೋಭಾವ ನಮಗಿಲ್ಲಿ ಮುಖ್ಯವೆನಿಸುತ್ತದೆ.

ಇದೇ ರೀತಿಯಲ್ಲಿ ಈ ಕೃತಿಯಲ್ಲಿ ಕಂಡುಬರುವ ಇನ್ನೊಂದು ಮುಖ್ಯ ಪಾತ್ರವೆಂದರೆ ವೆಳತ್ತಪಿಳ್ಳೆಯ ದೊಡ್ಡಪ್ಪ ಮರುಂದು ಇವನಿಗೂ ಕಾಡಿನ ದಾರಿಗಳ ಪರಿಚಯವು, ಕಾಡಿನ ಪರಿಚಯವು ಅಲ್ಲಿನ ಮರಗಿಡಗಳ ಪರಿಚಯವು ಆಳವಾಗಿದೆ. ಮರುಂದವು ಕೂಡ ಯಾವುದೇ ಪ್ರತಿಫಲಾಪೇಕ್ಷೆಯನ್ನು ಬಯಸದೇ ಸಸ್ಯ ಸಂಗ್ರಹಣದ ಸಂದರ್ಭದಲ್ಲಿ ತನಗೆ ಗೊತ್ತಿರುವ ಔಷಧಿಯ ಗುಣ ಹೊಂದಿರುವ ಹಲವು ಸಸ್ಯಗಳನ್ನು ತೋರಿಸಿ ಸಹಕರಿಸುತ್ತಾನೆ. ಇನ್ನು ಗಿಡ್ಡನಾಯಕನ ಪಾತ್ರವು ಕೂಡ ಇಲ್ಲಿ ಮುಖ್ಯವಾಗುತ್ತದೆ. ಬಿ.ಜಿ.ಎಲ್.ಸ್ವಾಮಿಯವರು ವಿದ್ಯಾರ್ಥಿ ಜೀವನದಲ್ಲಿದ್ದಾಗಲೇ ಆಗುಂಬೆಯ ಕಾಡುಗಳಿಗೆ ಭೇಟಿ ನೀಡಿರುತ್ತಾರೆ. ಆಗ ಪರಿಚಯವಾಗಿದ್ದ ವ್ಯಕ್ತಿಯೇ ಗಿಡ್ಡನಾಯಕ. ಇವನಿಗೆ ಆ ಕಾಡಿನ ಬಗ್ಗೆ, ಅಲ್ಲಿನ ಮರಗಿಡಗಳ ಬಗೆಗೆ ಇದ್ದ ಜ್ಞಾನವನ್ನು ನೋಡಿಯೇ ಅವನನ್ನು ಅರಣ್ಯ ಇಲಾಖೆಯಲ್ಲಿಯೇ ಉಳಿಸಿಕೊಳ್ಳುವ ಪ್ರಯತ್ನ ಮಾಡಿ ಓದು -ಬರಹ ಬಾರದ ಅವನಿಗೆ ಕಾವಲುಗಾರನ ಕೆಲಸ ಕೊಟ್ಟಿದ್ದರು. ಆದರೆ ತನ್ನ ಸ್ವಂತ ದಕ್ಷತೆ, ಪ್ರಾಮಾಣಿಕತೆಯಿಂದ ಹಂತ ಹಂತವಾಗಿ ಮೇಲೇರಿ ರೇಂಜರ್ ಪದವಿಗೆ ಬಡ್ತಿಯನ್ನು ಪಡೆದುಕೊಂಡಿದ್ದ ಅವನಲ್ಲಿನ ನಿಸ್ವಾರ್ಥ ಮನೋಭಾವ ಅಲ್ಲಿನ ಅಧಿಕಾರಿಗಳಿಗೆ ಅಧ್ಯಯನಕ್ಕಾಗಿ ಬರುವ ವಿದ್ಯಾರ್ಥಿಗಳಿಗೆ ತುಂಬ ಪ್ರಿಯವಾಗಿತ್ತು. ಆದರೆ ಸ್ವಾಮಿಯವರು ವಿದ್ಯಾರ್ಥಿಗಳೊಂದಿಗೆ ಮತ್ತೊಮ್ಮೆ ಭೇಟಿ ಕೊಟ್ಟಾಗ ಅವರು ಕೆಲಸದಿಂದ ವಿಶ್ರಾಂತಿ ಪಡೆದಿದ್ದರು. ಇದರ ಬಗ್ಗೆ ಮಾತನಾಡುತ್ತಾ ಅಲ್ಲಿನ ಅರಣ್ಯ ಅಧಿಕಾರಿ "ಗಿಡ್ಡನಾಯಕನಂಥ

ಪಳಗಿದ ಉದ್ಯೋಗಿ ಇನ್ನೆಲ್ಲಿ ಸಿಕ್ಕುತ್ತಾನೆ! ಆತನನ್ನು ಉಳಿಸಿಕೊಂಡಿದ್ದ ಮೇಲಾಧಿಕಾರಿಗಳು ತಾನೇ ಇನ್ನೆಲ್ಲಿ ಸಿಕ್ಕುತ್ತಾರೆ?"[7] ಎಂದು ಹೇಳುವ ಮಾತಿನಲ್ಲಿ ಅಲ್ಲಿನ ಆಡಳಿತ ವ್ಯವಸ್ಥೆಯ ದೌರ್ಬಲ್ಯಗಳು ಅನಾವರಣಗೊಳ್ಳುತ್ತವೆ. ಹೀಗೆ ಈ ಮೂವರಲ್ಲೂ ಕಂಡುಬರುವ ಜ್ಞಾನ, ನಿಸ್ವಾರ್ಥ ಮನೋಭಾವ ನಮ್ಮನ್ನು ಆಕರ್ಷಿಸುತ್ತದೆ. ಇದೇ ರೀತಿ ಕಾಡಿನಲ್ಲೇ ಹುಟ್ಟಿ ಬೆಳೆದು ಅಪಾರ ಜ್ಞಾನವಿದ್ದರೂ ಕೂಡ ಬೆಳಕಿಗೆ ಬರದೇ ತಮ್ಮಲ್ಲೇ ಅದನ್ನು ಮಣ್ಣಾಗಿಸಿಕೊಳ್ಳುವ ಪ್ರತಿಭೆಗಳ ಮೇಲೆ ಈ ಸನ್ನಿವೇಶಗಳು ಬೆಳಕನ್ನು ಬೀರುತ್ತವೆ. ಇಂತಹವರನ್ನು ಗುರುವಿನ ಸ್ಥಾನದಲ್ಲಿಟ್ಟು ಅವರ ಜ್ಞಾನದ ಉಪಯೋಗವನ್ನು ಪಡೆಯಬೇಕೆಂಬ ಹಂಬಲವನ್ನು ವ್ಯಕ್ತಪಡಿಸುತ್ತಾರೆ.

ಇಂತಹ ನೈಜಪ್ರತಿಭೆಗಳನ್ನು ತೇಜಸ್ವಿಯವರು ಕೂಡ ತಮ್ಮ ಕೃತಿಗಳಲ್ಲಿ ಗುರುತಿಸಿದ್ದಾರೆ. ಅಂತಹವರಲ್ಲಿ ಚೀಂಕ್ರಮೇಸ್ತ್ರಿ, ಮಂದಣ್ಣ, ಕರಿಯಪ್ಪ, ವೆಂಕಟ ಮುಂತಾದವರನ್ನು ನೋಡಬಹುದಾಗಿದೆ. 'ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆ'ಗಳಲ್ಲಿ ಬರುವ ಚೀಂಕ್ರಮೇಸ್ತ್ರಿಯ ಬಗೆಗೆ ನೋಡುವುದಾದರೆ ಮಲೆನಾಡಿನ ಯಾವುದೋ ಒಂದು ಮೂಲೆಯಲ್ಲಿ ಅಜ್ಞಾತವಾಗಿರುವ ಚೀಂಕ್ರಮೇಸ್ತ್ರಿಯನ್ನು ವಿಶ್ವವಿಖ್ಯಾತಿ ಪಡೆದ ತತ್ವಜ್ಞಾನಿ ಅರಿಸ್ಟಾಟಲಿಗೆ ಹೋಲಿಸುತ್ತಾರೆ. ಇಲ್ಲಿ ಅರಿಸ್ಟಾಟಲ್ ಮತ್ತು ಚೀಂಕ್ರ ಇಬ್ಬರೂ ಒಂದೇ. ಏಕೆಂದರೆ ಅರಿಸ್ಟಾಟಲ್‌ಗೂ ಹಾವು ಮೀನಿಗೂ ಇರುವ ಸಂಬಂಧ ತಿಳಿಯುವುದಕ್ಕೆ ಎಷ್ಟೋ ಮೊದಲೇ ಹಾವು ಮೀನಿನ ವಿಚಿತ್ರ ಸಂಗತಿಗಳನ್ನು ನನಗೆ ಹೇಳಿದವನು ಈ ಮುದುಕ ಚೀಂಕ್ರಮೇಸ್ತ್ರಿ ಎಂದು ಹೇಳುವ ತೇಜಸ್ವಿ "ಚೀಂಕ್ರ ಯಾರ ಜೊತೆಯೂ ಮಾತನಾಡದ ಮೌನಿ. ಅವನ ವರ್ತನೆ ನೋಡಿದರೆ ಅವನೊಬ್ಬ ಝೆನ್ ಬುದ್ಧಿಸ್ಟ್ ಇರಬಹುದೆನಿಸುತ್ತದೆ. ಇಲ್ಲದಿದ್ದರೆ ಯಾರೊಡನೆಯೂ ಮಾತನಾಡದೆ ಕಾಲ ಪ್ರವಾಹದಂತೆ ಹರಿಯುವ ನದಿಯನ್ನೇ ದಿಟ್ಟಿಸುತ್ತಾ ಯಾಕೆ ಅವನು ಕುಳಿತುಕೊಳ್ಳಬೇಕು"[8] ಎಂದು ಅವನ ಜೀವನವೃತ್ತಾಂತವನ್ನರಿಯಲು ಮುಂದಾಗುತ್ತಾರೆ. ಆಗ ಬಿಚ್ಚಿಕೊಳ್ಳುವ ಈ ಹಾವು ಮೀನಿನ ಬಗೆಗೆ ಅವನಲ್ಲಿರುವ ಜ್ಞಾನ ಅವನ ಮಾತಿನ ಪ್ರಕಾರ "ಭದ್ರನದಿಯಲ್ಲಿ ಒಂದು ಜಾತಿಯ ಹಾವು, ಮೀನು ಹದಿನೈದು ಅಡಿ ಉದ್ದ ಬೆಳೆಯುತ್ತದಂತೆ ಮೈಮೇಲೆಲ್ಲ ಹಳದಿ ಪಟ್ಟೆಗಳಿರುವ ಅದು ನೋಡಲು ಹೆಬ್ಬಾವಿಗಿಂತಲೂ ಭಯಂಕರ. ಈ ಮೀನು ಒಮ್ಮೊಮ್ಮೆ ರಾತ್ರಿವೇಳೆ ನೀರಿನಿಂದ ಹೊರಬಂದು ನದಿ ಸಮೀಪದ ಮನೆಗಳಿಗೆ ನುಗ್ಗಿ ಅವರು ಸಾಕಿದ ಕೋಳಿಗಳನ್ನು ತಿಂದುಬಿಡುತ್ತದಂತೆ. ಅದಕ್ಕಾಗಿ ನದಿಯ ಬಳಿ ಮನೆಗಳಿರುವವರು ಕೋಳಿ ಒಡ್ಡಿ ಸುತ್ತ ಬೂದಿ ಚೆಲ್ಲಿರುತ್ತಾರೆ. ಮೀನು ಕೋಳಿ ಕದಿಯಲು ಬಂದಾಗ ಅದರ ಮೈಮೇಲಿನ ಲೋಳೆಗೆ ಬೂದಿ ಅಂಟಿಕೊಂಡರೆ ಮೀನು ಚಲಿಸಲಾರದೆ ಸಿಕ್ಕಿಬೀಳುತ್ತದೆ. ಈ ಮೀನಿನ ಮಾಂಸವಂತೂ ಜಗತ್ತಿನಲ್ಲಿಯೇ ಸರ್ವಶ್ರೇಷ್ಠ ಆಹಾರವೆಂದು ಅದನ್ನು ತಿಂದರೆ ಮೂಲವ್ಯಾಧಿಯಿಂದ ಹಿಡಿದು ಚರ್ಮರೋಗಗಳವರೆಗೆ

ಸಕಲವು ಪರಿಹಾರವಾಗುತ್ತವೆಂದು ಹೇಳಿದ"[9] ಆದರೆ ಅದೇ ಹಾವು ತನ್ನ ಮಗನ ಪ್ರಾಣಕ್ಕೆ ಕುತ್ತಾದ ಬಗೆಯನ್ನು ತಿಳಿಸುತ್ತಾನೆ. ಮೊದಲು ಹಾವು ಮೀನುಗಳ ಬಗ್ಗೆ ತಿಳಿದದ್ದು ತೇಜಸ್ವಿ ಇವನಿಂದಲೇ.

ನಂತರ ಹಾವು ಮೀನುಗಳ ಬಗ್ಗೆ ಮೊದಲೇ ಯೋಚಿಸಿದ್ದ ಅರಿಸ್ಟಾಟಲ್ ಕಡೆಗೆ ಗಮನಹರಿಸಿದಾಗ ಚೀಂಕ್ರ ಮತ್ತು ಅರಿಸ್ಟಾಟಲ್‌ನ ಮಾತಿನಲ್ಲಿ ಹೋಲಿಕೆಯೂ ಕಂಡುಬರುತ್ತದೆ. ಆದರೆ ಅಷ್ಟು ದೊಡ್ಡ ತತ್ವಜ್ಞಾನಿ ಹಳ್ಳಿಯ ಈ ಅನಕ್ಷರಸ್ಥ ಮುದುಕನಿಗೆ ತಿಳಿಯುವುದಾದರೂ ಹೇಗೆ ಚೀಂಕ್ರ ಹೇಳಿದ ಮಾತುಗಳೆಲ್ಲವು ತನ್ನ ಅನುಭವಕ್ಕೆ ಬಂದಿದ್ದೇ ಆಗಿದೆ. ಇನ್ನು ಅರಿಸ್ಟಾಟಲ್ ಕೂಡ "ನದಿಗಳಲ್ಲಿನ ಹಾವು ಮೀನುಗಳಲ್ಲಿ ಗಂಡು ಹೆಣ್ಣು ಎಂದು ಇಲ್ಲವೇ ಇಲ್ಲ. ಅವುಗಳಲ್ಲಿ ಅಂಡಕೋಶವು ಇಲ್ಲ, ಮೊಟ್ಟೆ ಇಡುವುದೂ ಇಲ್ಲ, ಮರಿ ಹಾಕುವುದೂ ಇಲ್ಲ, ಈ ಹಾವುಮೀನುಗಳು ಸಮುದ್ರದ ಪಾತಾಳದಿಂದ ಉದ್ಭವಿಸುತ್ತವೆ"[10] ಎಂದು ಹೇಳಿ ಮುಂದುವರೆದಂತೆ ಚೀಂಕ್ರಮೇಸ್ತ್ರೀಯ ರೀತಿಯಲ್ಲೇ ಹಾವುಮೀನುಗಳು ಒಮ್ಮೊಮ್ಮೆ ರಾತ್ರಿ ವೇಳೆ ನದಿಯಿಂದ ಹೊರಬಂದು ರೈತರ ಬೆಳೆಗಳಿಗೂ, ಸಾಕುಪ್ರಾಣಿಗಳಿಗೂ ತೊಂದರೆ ಕೊಡುತ್ತವೆಂದು ಹೇಳುತ್ತಾರೆ. ಅದು ಎಂಟು ಗಂಟೆಗಳಿಗೂ ಹೆಚ್ಚು ಕಾಲ ನೀರಿನಿಂದ ಹೊರಗೆ ಬದುಕಬಲ್ಲವಾದ್ದರಿಂದ ಇದು ಸಾಧ್ಯವಿರಬಹುದು ಎನ್ನುತ್ತಾನೆ. ಈ ರೀತಿ ಯಾವುದೇ ತೊಡಕಿಲ್ಲದೆ ಇಬ್ಬರನ್ನು ಸಮೀಕರಿಸಿ ನೋಡುವ ದೃಷ್ಟಿಕೋನ ತೇಜಸ್ವಿಯಲ್ಲಿರುವುದು ಒಂದು ವಿಶೇಷವೇ ಹೌದು.

ಇದೇ ರೀತಿಯ ಪಾತ್ರಗಳನ್ನು ತೇಜಸ್ವಿಯವರ 'ಕರ್ವಾಲೋ' ಕಾದಂಬರಿಯಲ್ಲೂ ನೋಡಬಹುದಾಗಿದೆ. "ಸಾವಿರಾರು ವರ್ಷಗಳಿಂದ ಪ್ರಕೃತಿ ಸಮೂಹದ ನಡುವೆ ಬದುಕಿಕೊಂಡು ಬಂದ ಅಸಾಮಾನ್ಯ ಜೀವಿಯ ಅನ್ವೇಷಣೆ ಕರ್ವಾಲೋ ವಿಜ್ಞಾನಿಯ ಮಹೋದ್ದೇಶವಾಗಿದ್ದರೆ ಮಂದಣ್ಣನಿಗೆ ಆ ಓತಿಕ್ಯಾತ ಮಾದರಿಯ ಸರಿಸೃಪ ಆಗೀಗ ಸಾಮಾನ್ಯವಾಗಿ ಕಣ್ಣಿಗೆ ಕಾಣಿಸುವಂತಹದ್ದು. ಯಾವುದನ್ನು ಕರ್ವಾಲೋ ಗಹನವೆಂದು ಪರಿಭಾವಿಸುತ್ತಾನೊ ಮಂದಣ್ಣ ಅದನ್ನು ಸರಳ ಎಂದು ತಿಳಿಯುತ್ತಾನೆ. ವಿಜ್ಞಾನ ಬದುಕಿನ ರಹಸ್ಯಗಳನ್ನು ಗಹನ ಎಂದು ಭಾವಿಸಿದರೆ ಜನಪದ, ಅದೇ ಪ್ರಕೃತಿಯನ್ನು ಸರಳವಾಗಿ ಭಾವಿಸಿದಂತಿದೆ ಈ ಸಂಗತಿ. ಹಾವಿನ ಅಂಗಾಂಗಗಳು ಅನೇಕ ವರ್ಷಗಳಿಂದ ವಿಜ್ಞಾನಿಗಳಿಗೆ ಅಧ್ಯಯನ ವಸ್ತುವಾದರೆ, ಗೊಲ್ಲರ ವೆಂಕಟನಿಗೆ ಅದು ಅಷ್ಟೇ ಮೇಲ್ಪದರ ಸರಳ ಸಂಗತಿ. ಈ ಬಗೆಯ ಮುಖಾಮುಖಿ ಕಾದಂಬರಿಯ ಉದ್ದಕ್ಕೂ ಕಾಣಿಸುತ್ತದೆ. ಜನಪದ ವಿಜ್ಞಾನಿಗಳಾದ ಮಂದಣ್ಣ, ವೆಂಕಟ, ಕರಿಯಪ್ಪ ಇವರೆಲ್ಲ ಪ್ರಕೃತಿಯ ನಡುವೆಯೇ ಬಾಳಿಬದುಕುತ್ತಿರುವವರಾದ ಕಾರಣ ಅನ್ವೇಷಕರಲ್ಲದ ಅವರಿಗೆ ಪ್ರಕೃತಿ ರಹಸ್ಯಮಯ ಸಂಗತಿಯಾಗಿ ಕಾಣುವುದೇ ಇಲ್ಲ. ಆದರೆ ಅನ್ವೇಷಣೆಗೆಂದೇ ಸಿದ್ಧರಾಗಿ ಕುಳಿತ ಕರ್ವಾಲೋಗೆ ಪ್ರಕೃತಿ ವಿವರಗಳು ಸರಳ, ಸುಲಭ ಅಲ್ಲ. ಹೀಗೆ ತೇಜಸ್ವಿ ಕಾದಂಬರಿಯಲ್ಲಿ ಪ್ರಕೃತಿಯ ಮಕ್ಕಳನ್ನು, ಪ್ರಕೃತಿಯು ಅಧ್ಯಯನ ವಸ್ತು ಎಂದು ತಿಳಿದು

ಅದರಿಂದ ಬೇರೆಯಾಗಿಯೇ ನಿಂತು ಅದರ ಅರ್ಥ ಸಾಧ್ಯತೆಗಳನ್ನು ಹುಡುಕುವ ಬುದ್ಧಿವಂತರೆನಿಸಿಕೊಂಡವರನ್ನು ಎದುರುಬದುರು ನಿಲ್ಲಿಸುತ್ತಾರೆ."[11] ಈ ರೀತಿ ಇಬ್ಬರೂ ಲೇಖಕರು ನೈಜಪ್ರತಿಭೆಗಳನ್ನು ಪ್ರಕೃತಿಯ ಮಡಿಲಿನಲ್ಲೇ ಗುರುತಿಸಿ ಅವರಲ್ಲಿರುವ ಅಪಾರವಾದ ಜ್ಞಾನವನ್ನು ಹೊರಗೆಡಹಿದ್ದಾರೆ. ಈ ಪಾತ್ರಗಳನ್ನು ನೋಡಿದಾಗ ಇದೇ ರೀತಿ ಜ್ಞಾನ ಸಂಪತ್ತನ್ನು ತಮ್ಮದಾಗಿಸಿಕೊಂಡು ಅದರ ಅರಿವೇ ಇಲ್ಲದ ಹಾಗೆ ಮೇಲ್ಪದರಕ್ಕೆ ಬಾರದೇ ಕಣ್ಮರೆಯಾಗಿರುವವರನ್ನು ಕಲ್ಪಿಸಿಕೊಂಡರೆ ಬೇಸರವಾಗದಿರದು.

ಇವರಿಬ್ಬರಲ್ಲೂ ಕಾಣುವ ಮತ್ತೊಂದು ಸಮಾನ ಅಂಶವೆಂದರೆ ಸ್ಥಳೀಯ ಭೂಗೋಳದ ಬಳಕೆ. ತೇಜಸ್ವಿಯವರ ಕೃತಿಗಳು ಮೂಡಿಗೆರೆಯ ಪ್ರದೇಶದ ಸುತ್ತಮುತ್ತಲಿನ ಪರಿಸರದೊಂದಿಗೆ ಹೆಣೆಗೊಂಡಿದೆ. ಇಲ್ಲಿ ಪಡೆದಂತಹ ಅನುಭವಗಳ ಸಂಗ್ರಹವೇ ಕೃತಿಯ ಬಹುಪಾಲನ್ನು ಆವರಿಸಿಕೊಂಡಿದೆ. ಅದು ಶಿಕಾರಿಯ ಅನುಭವಗಳಾಗಿರಬಹುದು. ಅಲ್ಲಿನ ಪ್ರಾಣಿ ಪಕ್ಷಿಗಳ ಕುತೂಹಲಕಾರಿ ವರ್ತನೆ, ಜೀವನಶೈಲಿ, ಮನುಷ್ಯನ ವಿನಾಶಕಾರಿಗುಣ ಪರಿಸರಕ್ಕೆ ಕೆಡುಕಾಗಿ ಪರಿಣಮಿಸಿರುವ ಅಂಶಗಳು ರೋಗಗ್ರಸ್ತ ಸಮಾಜ ವ್ಯವಸ್ಥೆ, ತನ್ನನ್ನು ಪರಿಸರವಾದಿಯನ್ನಾಗಿ ರೂಪಿಸಿದ ಹಲವು ಅಂಶಗಳಾಗಿರಬಹುದು. ಇವೆಲ್ಲದರ ಮೇಲೆ ಸ್ಥಳೀಯ ಭೂಗೋಳದ ದಟ್ಟ ಪ್ರಭಾವವಿರುವುದನ್ನು ನೋಡಬಹುದಾಗಿದೆ. ಬಿ.ಜಿ.ಎಲ್.ಸ್ವಾಮಿಯವರು ಸಹ ತಾವು ಭೇಟಿ ನೀಡಿದ್ದ ಪಶ್ಚಿಮ ಘಟ್ಟ ಪ್ರದೇಶಗಳು, ಕಡಲುತೀರದ ಪ್ರದೇಶಗಳಲ್ಲಿ ಅಧ್ಯಯನ ಕೈಗೊಂಡಾಗ ಪಡೆದುಕೊಳ್ಳುವ ಹಲವು ಅನುಭವಗಳು, ಸೃಷ್ಟಿಯ ವೈಚಿತ್ರ್ಯ, ವಿದ್ಯಾರ್ಥಿಗಳ ಒಡನಾಟದಿಂದ ಪಡೆದ ಹಲವು ಅಂಶಗಳು, ಅಲ್ಲಿನ ಅಸಮರ್ಪಕ ಆಡಳಿತ ವ್ಯವಸ್ಥೆ, ದುರ್ಬಲ ರಕ್ಷಣಾವ್ಯವಸ್ಥೆ, ಬಂಡವಾಳಶಾಹಿಯ ದರೋಡೆ ಈ ರೀತಿಯ ಹಲವು ಅಂಶಗಳನ್ನು ಕೃತಿಯಲ್ಲಿ ಅಭಿವ್ಯಕ್ತಿಸಿರುವ ಕ್ರಮವನ್ನು ನೋಡಬಹುದು. ಇಂತಹ ವಿಷಯಗಳನ್ನು ತಿಳಿಸುತ್ತಲೇ ಇಬ್ಬರು ಲೇಖಕರು ಸ್ಥಳೀಯತೆಯಿಂದ ವಿಶ್ವಾತ್ಮಕತೆಯೆಡೆಗೆ ಚಲಿಸುವುದನ್ನು ನೋಡಬಹುದು. ಸ್ಥಳೀಯವಾಗಿ ಘಟಿಸುವ ಕೆಲವೊಂದು ಘಟನೆಗಳೇ ವಿಸ್ತೃತರೂಪವನ್ನು ಪಡೆದು ಇಡೀ ವ್ಯವಸ್ಥೆಯ ಕಡೆ ನಮ್ಮ ಗಮನ ಹರಿಯುವಂತೆ ಮಾಡುತ್ತದೆ. ಸರಳಭಾಷೆಯ ನಿರೂಪಣೆಯಲ್ಲೇ ಜಟಿಲವೂ, ಗಹನವು ಆದ ಚಿಂತನೆಗಳ ಕಡೆ ನಮ್ಮನ್ನು ಕರೆದೊಯ್ಯುವಂತಹದ್ದನ್ನು ನೋಡಬಹುದಾಗಿದೆ. ಹಾಗೆಯೇ ಇಬ್ಬರ ಕೃತಿಗಳಲ್ಲೂ ವ್ಯಂಗ್ಯಚಿತ್ರಗಳ ಅಳವಡಿಕೆ ನಮ್ಮ ಗಮನ ಸೆಳೆಯುತ್ತವೆ. ಈ ಅಣಕು ಚಿತ್ರಗಳ ವ್ಯವಸ್ಥೆಯನ್ನು, ವ್ಯಕ್ತಿಗಳ ವಿಚಿತ್ರ ವರ್ತನೆಗಳನ್ನು ವಿಡಂಬಿಸುವ ರೀತಿಯಲ್ಲಿ ಮೂಡಿಬರುವುದನ್ನು ಕಾಣಬಹುದಾಗಿದೆ.

ನಾವು ಹಲವು ಬಾರಿ ಕೇಳುವ ಕತೆಗಳನ್ನು ಸಾಮಾನ್ಯವಾಗಿ ಮನರಂಜನೆಯ ನೆಲೆಯಲ್ಲಿ ತೆಗೆದುಕೊಳ್ಳುವುದುಂಟು. ಹಾಗೆಯೇ ಆ ಕಥೆಗಳೇನಾದರೂ ದೈವೀಕಶಕ್ತಿಯ ನೆಲೆಯಲ್ಲಿ

ರೂಪುಗೊಂಡಿದ್ದರಂತೂ ಅದನ್ನು ಗೌರವಿಸಿ, ಹೊಗಳಿ ಹಾಗೆ ಮರೆತು ಬಿಡುತ್ತೇವೆ. ಆದರೆ ಈ ಇಬ್ಬರೂ ಲೇಖಕರು ಆ ರೀತಿಯಲ್ಲಿ ಚಾಲ್ತಿಯಲಿರಬಹುದಾದ ಕಥೆಗಳನ್ನು ನಮ್ಮ ವ್ಯವಸ್ಥೆಗೆ ಹೋಲಿಸಿ ಅಲ್ಲಿರುವ ದೋಷಗಳ ಕಡೆ ನಮ್ಮ ಗಮನ ಹರಿಯುವಂತೆ ಮಾಡಿರುವ ಕ್ರಮ ಗಮನಾರ್ಹವಾದುದಾಗಿದೆ. ಬಿ.ಜಿ.ಎಲ್.ಸ್ವಾಮಿಯವರು ತಾಲ/ಶ್ರೀತಾಲ ಮರದ ಬಗೆಗೆ ರೂಪುಗೊಂಡಿರುವ ಪುರಾಣ ಕಥೆಯೊಂದನ್ನು ಹೇಳುತ್ತಾ ಅಲ್ಲಿನ ಆಡಳಿತವ್ಯವಸ್ಥೆಯೊಂದಿಗೆ ನಮ್ಮ ಆಡಳಿತ ವ್ಯವಸ್ಥೆಯನ್ನು ಹೋಲಿಸಿ ತಿಳಿಸ ಹೊರಟಿರುವ ವಿಷಯ ಮುಖ್ಯವೆನಿಸುತ್ತದೆ. "ಬ್ರಹ್ಮನಿಂದ ಸೃಷ್ಟಿಗೊಂಡ ವಸ್ತುಗಳು ಜನರ ಬೇಕು ಬಯಕೆಗಳನ್ನು ತೀರಸಲಾರದೆ ಹೋದವು. ಹಸಿವನ್ನು ನೀಗಿಸಿ ಬೇನೆಯನ್ನು ಗುಣಪಡಿಸಿ, ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿಸಿ, ಮನೆಯನ್ನು ಕಟ್ಟಿ ಬೆಳಗುವಂತಹ ಗುಣಗಳನ್ನು ಒಂದೇ ವ್ಯಕ್ತಿಯಲ್ಲಿ ಬಯಸಿದರಂತೆ. ಶಿವನನ್ನು ಕುರಿತು ತಪಸ್ಸು ಮಾಡಿದರು ಇವರ ಮೊರೆಯನ್ನು ಕೇಳಿ ಶಿವನು ವಿಷ್ಣುವಿನ ಬಳಿಗೆ ಹೋಗಿ "ಸೃಷ್ಟಿಯನ್ನು ಕಾಪಾಡುವುದು ನಿನ್ನ ನಿತ್ಯಕರ್ತವ್ಯ. ಮಾನವರ ಸುಖದುಃಖಗಳ ಹೊಣೆ ನಿನ್ನದು. ಅದನ್ನು ತೃಪ್ತಿಯಲ್ಲಿರುವಂತೆ ಮಾಡಬೇಕಾದವನು ನೀನು. ನಿನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸಿಲ್ಲ ಕಾರಣವೇನು?" ಎಂದು ತನಿಖೆ ಮಾಡಿದನಂತೆ, ನಡುಗಿ ಹೋದ ವಿಷ್ಣು ಸಾಷ್ಟಾಂಗ ಬಿದ್ದು "ಪ್ರಭು ನನ್ನ ಕರ್ತವ್ಯ ನಿರ್ವಹಣೆಯಲ್ಲಿ ಕುಂದು ಏನೂ ಇಲ್ಲ ಆ ಬ್ರಹ್ಮನು ಸೃಷ್ಟಿಸಿದ ರಖಮುಗಳು ಸಾಲದೇ ಹೋಗಿವೆ." ಎಂದು ಬಿನ್ನಹಿಸಿದನಂತೆ. ಶಿವನು ಕೋಪದಿಂದ ಕೆಂಡವಾಗಿ ಬ್ರಹ್ಮನ ಬಳಿಗೆ ಹೋಗಿ "ಜನರ ಉಪಯೋಗಕ್ಕೆ ಅವಶ್ಯಕವಾಗಿರುವ ವಸ್ತುಗಳನ್ನೆಲ್ಲಾ ಏಕೆ ಸೃಷ್ಟಿಸಲಿಲ್ಲ? ನೀನು ಅಪ್ರಯೋಜಕ" ಎಂದು ದಬಾಯಿಸಿದನಂತೆ, ಬ್ರಹ್ಮ ಉಡುಗಿಹೋಗಿ ಮೈ ಬೆವರಿ ತಡವರಿಸುತ್ತಾ ಮಹಾಪ್ರಭೋ, ನನಗೆ ತಿಳಿಯಬಂದದ್ದನ್ನೆಲ್ಲ ಸೃಷ್ಟಿಸಿಬಿಟ್ಟಿದ್ದೇನೆ ಎಂದು ಪೇಚಾಡಿಕೊಂಡನಂತೆ. ಶಿವನ ಅರ್ಧಾಂಗಿಯಾಗಿದ್ದ ಉಮೆ 'ತಪ್ಪು ವಿಷ್ಣುವಿನದು ಅಲ್ಲ, ಬ್ರಹ್ಮನದು ಅಲ್ಲ' ಎಂದು ಆಜ್ಞೆ ಮಾಡಿದಳಂತೆ. ಈ ವೃಕ್ಷವೇ ತಾಳ, ಪನ್ನೈ ಎಂಬ ಹೆಸರುಗಳಿಂದ ತಮಿಳು ಭೂಮಿಯಲ್ಲಿ ಜನ್ಮತಾಳಿತಂತೆ"[12] ಎಂದು ಈ ಮರದ ಬಗೆಗೆ ಚಾಲ್ತಿಯಲ್ಲಿರುವ ಕಥೆಯನ್ನು ಹೇಳಿದ ನಂತರ ಬಿ.ಜಿ.ಎಲ್.ಸ್ವಾಮಿಯವರು "ಈ ಕಥೆ ನನಗೆ ಸ್ವಾರಸ್ಯವಾಗಿದೆ. ದೇವಲೋಕದ ಸರ್ಕಾರದಲ್ಲಿ ನಡೆಯುವ ಅಧಿಕಾರ ಪ್ರೀತಿಯ ಮುಖವೊಂದನ್ನು ಇಲ್ಲಿ ಕಾಣಬಹುದು. ಕೆಲ ಅಧಿಕಾರಿಯ ತಿಳುವಳಿಕೆ ಸಾಲದೆ ಕರ್ತವ್ಯಲೋಪವಾದಾಗ ಮೇಲಾಧಿಕಾರಿಯಾದವನು ಎಲ್ಲವನ್ನು ತಿಳಿದವನಾಗಿ ನ್ಯೂನತೆಗಳನ್ನು ತಿದ್ದುವ ಬಗೆಯನ್ನು ಹೇಳಿಕೊಟ್ಟು ಮಾಡಿಸುತ್ತಿದ್ದ. ಮಾನವ ಲೋಕದಲ್ಲಿ ಮೇಲಾಧಿಕಾರಿಯಲ್ಲಿರುವವನು ಇಂತಹ ಸಂದರ್ಭ ಒದಗಿದಾಗ ತನ್ನ ಕೆಳ ಅಧಿಕಾರಿಯನ್ನು 'ಇನ್‌ಎಫಿಸಿಯಂಟ್' ಎಂದು ಡಿಸ್‌ಮಿಸ್ ಮಾಡಿಬಿಡುತ್ತಾನೆ. ಮೇಲಾಧಿಕಾರಿ ತನ್ನ ಸ್ಥಾನದಲ್ಲಿಯೇ ಚಿರಾಯುವಾಗುತ್ತಾನೆ. ಮಾಡಬೇಕಾದ ಕರ್ತವ್ಯವು ಹಾಗೆಯೇ

ಶಾಶ್ವತವಾಗಿ ಉಳಿದುಬಿಡುತ್ತದೆ. ಸ್ವತಂತ್ರ ಭಾರತ ಯುಗದಲ್ಲಿ ಡಿಸ್‌ಮಿಸ್ ಆದವನು ಸಾಮಾನ್ಯವಾಗಿ ಸುಮ್ಮನಿರುವುದಿಲ್ಲ. ಕೋರ್ಟಿನಲ್ಲಿ ರಿಟ್‌ಪಿಟಿಷನ್ ಹಾಕಿ ಗೆದ್ದು ಮೇಲಾಧಿಕಾರಿಯ ಸ್ಥಾನದಲ್ಲಿಯೇ ಬಂದು ಕುಳಿತುಕೊಂಡು ಬಿಡುತ್ತಾನೆ. ಅವನು ನಡೆದ ದಾರಿಯಲ್ಲೇ ಇವನು ನಡೆಯುತ್ತಾನೆ. ಆಗ ಮಾಡಬೇಕಾದ ಕರ್ತವ್ಯ ಜನ್ಮಾಂತರಗಳಾದರೂ ಪೂರೈಸುವುದಿಲ್ಲ"[13] ಈ ಕಥೆಯ ಮೂಲಕ ಬಿ.ಜಿ.ಎಲ್.ಸ್ವಾಮಿಯವರು ಭ್ರಷ್ಟಾಚಾರದಿಂದ ತುಂಬಿಹೋಗಿರುವ ಆಡಳಿತವ್ಯವಸ್ಥೆಯೊಂದರ ರಾಜಕಾರಣವನ್ನು ಬಯಲಿಗೆಳೆಯುತ್ತಾರೆ. ಅಷ್ಟೇ ಅಲ್ಲದೆ ಅಂತಹ ವ್ಯವಸ್ಥೆಯೊಂದರ ಕಟುವಾದ ಟೀಕೆಯನ್ನು, ವಿಡಂಬನೆಯನ್ನು ಇಲ್ಲಿ ಕಾಣಬಹುದಾಗಿದೆ. ಇಂತಹ ಕತೆಗಳು ನಮ್ಮ ಕರ್ತವ್ಯಕ್ಕೆ ಕಾರ್ಯಶೀಲತೆಗೆ ಮಾದರಿಯಾಗಬೇಕಾದಂತಹ ಸಂದರ್ಭದಲ್ಲೇ ಆ ರೀತಿ ಇದನ್ನು ಸ್ವೀಕರಿಸುವ ಮನಸ್ಸುಗಳು ಎಷ್ಟಿವೆ? ಎಂಬ ಪ್ರಶ್ನೆಯು ಎದುರಾಗುತ್ತದೆ.

ಇನ್ನು "ತೇಜಸ್ವಿಯವರು ಒಮ್ಮೆ ಲಂಕೇಶ್ ಪತ್ರಿಕೆಯಲ್ಲಿ ಮರಕುಟಿಗನ ಹಕ್ಕಿಯ ಬಗ್ಗೆ ಸಂಗ್ರಹಿಸಿ ಬರೆದಿದ್ದ ಜನಪದ ಕಥೆಯೂ ಇಲ್ಲಿ ಮುಖ್ಯವಾಗುತ್ತದೆ. ಪಾರ್ವತಿ ಪರಮೇಶ್ವರರು ಲೋಕಸಂಚಾರ ಹೊರಟಿದ್ದರು. ಪರಮೇಶ್ವರನಿಗೆ ಭೂಮಿ ಮೇಲಣ ಒಂದರ ಮರದಲ್ಲಿ ಟೊಳ್ಳಿನ ಭಾಗವನ್ನು ಕ್ರಮಬದ್ಧವಾಗಿ ಕುಟ್ಟುತ್ತಿದ್ದ ಸದ್ದು ಕೇಳಿಬಂತು. ಕುತೂಹಲವೆನಿಸಿ ಶಿವ ಮರದ ಬಳಿ ಬಂದರೆ ಮರದ ಕೊಂಬೆಯನ್ನು ಕುಟ್ಟುತ್ತಿದದ್ದು ಮರಕುಟಿಗನ ಹಕ್ಕಿ. ಶಿವನಿಗೆ ಆ ಹಕ್ಕಿಯ ಕುಟ್ಟುವಿಕೆಗೆ ಸರಿಸಮಾನಾಗಿ ತಾನು ನೃತ್ಯ ಮಾಡಬೇಕೆನಿಸಿತು. ಮಾಡಿದ ಹಕ್ಕಿಯ ಕುಟ್ಟುವಿಕೆ ಏರಿತು ಶಿವನು ತನ್ನ ಕುಣಿತವನ್ನು ಏರಿಸಿದ. ಹಕ್ಕಿಯ ಕುಟ್ಟುವಿಕೆ ತೀವ್ರವಾಯಿತು ಶಿವನಿಗೆ ಕುಣಿಯಲಾಗಲಿಲ್ಲ. ಸಿಟ್ಟು ಬಂದಿತು ಹೀಗೆಯೇ ಮರಕುಟ್ಟಿಕ್ಕೊಂಡು ಹುಳು ಉಪ್ಪಟೆ ತಿಂದುಕೊಂಡು ಕಾಲಕಳೆ ಎಂದು ಶಿವ ಹಕ್ಕಿಗೆ ಶಾಪಕೊಟ್ಟು ಕೈಲಾಸ ಸೇರಿದನಂತೆ. ತೇಜಸ್ವಿಯವರು ಸಂಗ್ರಹಿಸಿದ ಈ ಕಥೆ ಒಂದು ಪುಟ್ಟ ಹಕ್ಕಿಯ ಎದುರು, ಲೋಕದ ಯಜಮಾನನಾದ ಶಿವನನ್ನು ಒಂದು ಹಿಡಿಯಷ್ಟನ್ನು ಮಾಡಿ ನೋಡಿದಂತಾಗಿದೆ. ಹಕ್ಕಿಯ ಮನಸ್ಸಿಗಿಂತಲೂ, ಅದರ ಕಾಯಕಶ್ರಮಕ್ಕಿಂತಲೂ ಶಿವನ ಲೋಕಸಂಚಾರ, ನೃತ್ಯ ಮಹಿಮೆ ದೊಡ್ಡದಲ್ಲ ಎಂಬ ಪ್ರಕೃತಿಭಾವ ಇಲ್ಲಿದೆ"[14] ಇಲ್ಲಿ ಲೋಕದ ಒಡೆಯನಿಗೆ ಸಮನಾಗಿ ಸಾಮಾನ್ಯವಾದ ಒಂದು ಪಕ್ಷಿಯನ್ನು ನಿಲ್ಲಿಸುವುದರ ಮೂಲಕ ಸಾಮಾನ್ಯವಾದ ಪಕ್ಷಿಯ ವಿಶಿಷ್ಟತೆಯನ್ನು ಕರ್ತವ್ಯಶೀಲತೆಯನ್ನು ಅಸಮಾನ್ಯನಾದ ಶಿವನ ಅಸೂಯೆಯನ್ನು ಹೇಳುತ್ತಲೇ ಶಿವಲೋಕದ ಒಡೆಯನಾದರೇನಂತೆ ಅವನ ಅಧಿಕಾರದ ದುರ್ಬಳಕೆಯು ಅಧಿಕಾರಿಶಾಹಿ ವರ್ಗದವರ ತುಳಿತವನ್ನು ಪ್ರತಿನಿಧಿಸುವಂತಿದೆ. ಈ ಎರಡು ಕಥೆಗಳ ಮೂಲಕ ಇಡೀ ಆಡಳಿತವ್ಯವಸ್ಥೆಯ ಲೋಪದೋಷಗಳನ್ನು ಅಧಿಕಾರದ ದರ್ಪವನ್ನು ವಿರೋಧಿಸುವ ನೆಲೆಯೊಂದನ್ನು ಕಾಣಬಹುದಾಗಿದೆ.

ಅತ್ಯಮೂಲ್ಯವಾದ ವನಸಂಪತ್ತು, ಪ್ರಾಣಿ-ಪಕ್ಷಿಗಳು ಇವತ್ತಿನ ಸಂದರ್ಭದಲ್ಲಿ ಅಳಿವಿನ ಅಂಚಿಗೆ ತಲುಪಿರುವ ಸಂದರ್ಭದಲ್ಲೇ ಎಷ್ಟೊಂದು ನಮ್ಮಿಂದ ಕಣ್ಮರೆಯಾಗಿವೆ. ಇದಕ್ಕೆ ಕಾರಣವಾಗಿರುವ ಹಲವು ಅಂಶಗಳನ್ನು ಈ ಇಬ್ಬರೂ ಲೇಖಕರು ಗುರುತಿಸುವುದಲ್ಲದೇ ಅಂತಹ ಸಂದರ್ಭಗಳಿಗೆ ಮುಖಾಮುಖಿಯಾದಾಗ ಅಲ್ಲಿನ ಅವ್ಯವಸ್ಥೆಯನ್ನು, ಭ್ರಷ್ಟಾಚಾರವನ್ನು ಖಂಡಿಸುತ್ತಾ ಆಕ್ರೋಶಗೊಳ್ಳುವದನ್ನು, ಅಸಮಾಧಾನ ವ್ಯಕ್ತಪಡಿಸುವುದನ್ನು ಕಾಣಬಹುದಾಗಿದೆ. ಬಿ.ಜಿ.ಎಲ್.ಸ್ವಾಮಿಯವರ 'ಹಸಿರುಹೊನ್ನು' ಕೃತಿಯಲ್ಲಿ ಕಾಡುಗಳಿಗೆ ಭೇಟಿಕೊಟ್ಟ ಸಂದರ್ಭದಲ್ಲಿ ಅಲ್ಲಿನ ಕಾಡುಪ್ರಾಣಿಗಳನ್ನು ಆನೆ, ಕಾಡುಕೋಣ ಮೊದಲಾದವುಗಳನ್ನು ಹಿಡಿಯಲು ಹಳ್ಳ ತೋಡುವುದು, ಉರುಳು ಹಗ್ಗಗಳನ್ನು ಹರಡುವುದು ಈ ರೀತಿಯ ಹಲವು ಕೃತ್ಯಗಳನ್ನು ಕಣ್ಣಾರೆ ಕಂಡ ಸ್ವಾಮಿಯವರು ರೇಂಜರನನ್ನುದ್ದೇಶಿಸಿ ಪ್ರಾಣಿರಕ್ಷಣೆಗೆಂದು ಮೀಸಲಾಗಿರುವ ಕಾಡಿನಲ್ಲಿ ಇಂಥ ಕೃತ್ಯಗಳನ್ನು ತಡೆಗಟ್ಟುವುದಕ್ಕೆ ಸಾಧ್ಯವಿಲ್ಲವೇ? ಎಂದು ಪ್ರಶ್ನಿಸುತ್ತಾರೆ. ಅದಕ್ಕೆ ರೇಂಜರ್ ನೀಡುವ ಉತ್ತರ ಭಾರತದ ಕಾಡುಗಳ ದುರವಸ್ಥೆಯನ್ನು ಎತ್ತಿ ತೋರಿಸುವಂತಿರುತ್ತದೆ. ಪ್ರತಿಯಾಗಿ ಅವನು ಹೇಳುವ ಮಾತುಗಳಿವು. "ಏನು ಮಾಡುವುದು ಸರ್? ರಕ್ಷಣಾ ಪ್ರದೇಶದ ಹರವು ಅನೇಕ ಚದರ ಮೈಲಿ. ಇದಕ್ಕೆ ಅಧಿಕಾರಿಗಳು ನಾಲ್ಕು, ಎಂದರೆ ಒಬ್ಬೊಬ್ಬನೂ 15ರಿಂದ 20 ಮೈಲಿ ವಿಸ್ತೀರ್ಣವುಳ್ಳ ಪ್ರದೇಶಕ್ಕೆ ಕಾವಲಿರಬೇಕು. ಪ್ರತಿದಿನ ಅವನು ಒಂದು ಸಲ ಸುತ್ತಿ ಬರುವುದೂ ಸಾಧ್ಯವಿಲ್ಲ. ಆಗೊಂದು ಸಲ ಈಗೊಂದು ಸಲ ಅಪರೂಪವಾಗಿ ಕಳ್ಳ ಬೇಡರನ್ನು ಹಿಡಿದು ಕೋರ್ಟಿನಲ್ಲಿ ನಿಲ್ಲಿಸಿದರೆ ಎಂ.ಎಲ್.ಎ.ಗಳನ್ನು ಸಾಕ್ಷಿ ಕರೆದು ಬಚಾವಾಗಿ ಬಿಡುವುದು ಅಲ್ಲದೆ ಕೆಲವು ಸಲ ನಮ್ಮನ್ನೇ ಅಪರಾಧಿಗಳಂತೆ ಕಾಣಿಸಿಬಿಡುತ್ತಾರೆ"[15] ಎನ್ನುತ್ತಾನೆ. ರೇಂಜರನ ಈ ಮೇಲಿನ ಮಾತುಗಳಲ್ಲಿ 2 ಅಂಶಗಳು ಮುಖ್ಯವಾಗುತ್ತದೆ. ಮೊದಲನೆಯದು. ಅರಣ್ಯ ರಕ್ಷಣೆಗೆ, ಅಲ್ಲಿನ ಕಾಡುಪ್ರಾಣಿಗಳ ರಕ್ಷಣೆಗೆ ಮೀಸಲಿರುವ ದಕ್ಷ ಸಿಬ್ಬಂದಿಗಳ ಕೊರತೆ, ಎದ್ದು ಕಾಣುತ್ತದೆ. ನಮ್ಮ ಆಡಳಿತ ವ್ಯವಸ್ಥೆಯಲ್ಲಿರುವ ಅಧಿಕಾರಿಗಳಿಗೆ ಅರಣ್ಯಗಳಿಂದ ದೊರಕಬಹುದಾದ ಉಪಯೋಗಗಳು ಅದರಿಂದ ಪಡೆಯುವ ಲಾಭಗಳಿಕೆಯಲ್ಲಿ ಇರಬಹುದಾದ ಆಸಕ್ತಿ, ಬುದ್ಧಿವಂತಿಕೆ; ಕಾರ್ಯಶೀಲತೆ ಇವುಗಳಾವುವು ಅವುಗಳನ್ನು ರಕ್ಷಿಸುವ, ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಇಲ್ಲದಿರುವುದನ್ನು ನೋಡಬಹುದು. ಎರಡನೆಯದಾಗಿ ದಕ್ಷತೆಯಿಂದ ಕಾರ್ಯಪ್ರವೃತ್ತರಾಗುವ ಅಧಿಕಾರಿಗಳನ್ನು ಸಹ ಹಿಮ್ಮೆಟ್ಟಿಸುವ ರೀತಿಯಲ್ಲಿ ಭ್ರಷ್ಟಾಚಾರ ತುಂಬಿ ತುಳುಕುತ್ತಿರುವುದು. ರಾಜಕೀಯ ಶಕ್ತಿಗಳು, ಬಂಡವಾಳಶಾಹಿಗಳ ಜೊತೆ ಕೈ ಜೋಡಿಸಿ ಶಾಮೀಲಾಗಿ ಅರಣ್ಯಗಳು ಅವನತಿಯ ದಾರಿಯನ್ನು ಹಿಡಿಯುವುದರಲ್ಲಿ ತಮ್ಮ ಕಾಣಿಕೆಯನ್ನು ನೀಡಿರುವುದೇ ಆಗಿದೆ. ತನಗೇ ಅರಿವಿಲ್ಲದ ಹಾಗೇ ಅಥವಾ ಅರಿವಿದ್ದರೂ ಏನೂ ಮಾಡಲಾಗದ ನಿಸ್ಸಹಾಯಕ ಸ್ಥಿತಿಯಲ್ಲಿ ಇರುವ ರೇಂಜರು ಈ ಘಟನೆಗಳಿಗೆ ಸಾಕ್ಷಿಯಾಗಿದ್ದಾನೆ.

'ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು' ಎಂಬ ಪಠ್ಯದಲ್ಲಿ ತುಂಬಿ ಹರಿಯುತ್ತಿದ್ದ ನದಿ ಕಾಲಾಂತರದಲ್ಲಿ ಬತ್ತಿಹೋಗಿ ಅವಸಾನದ ಹಂತ ತಲುಪುವ ವಿವರವಿದೆ. ಇಲ್ಲಿ ಸ್ವತಃ ತೇಜಸ್ವಿಯವರೇ ಜೀವಂತ ಸಾಕ್ಷಿಯಾಗಿ ನಿಲ್ಲುತ್ತಾರೆ. "ಭದ್ರಾ ನದಿ ಕುದುರೆಮುಖದಿಂದ ಕಲ್ಲು ಬಂಡೆಗಳ ನಡುವೆ ಧುಮುಕುತ್ತಾ ನೊರೆ ಏಳಿಸುತ್ತಾ ಹರಿದರೆ, ಹೇಮಾವತಿ ನದಿ ಒಂದೇ ಮಟ್ಟದಲ್ಲಿ ಮರಳಿನ ರಾಶಿಗಳ ನಡುವೆ ಹರಿಯುತ್ತದೆ. ಗೋರೂರು ಅಣೆಕಟ್ಟು ಕಟ್ಟಿದ ಮೇಲೆ ಮಾರನೆ ವರ್ಷದಿಂದಲೇ ಹೇಮಾವತಿ ನದಿಯ ಪಾತ್ರ ಮರಳಿನಿಂದ ತುಂಬುತ್ತಾ ಆಳವಾದ ಮಡುಗಳೆಲ್ಲ ಗುಂಡಿಗಳೇ ಇಲ್ಲಿ. ಬೇಸಿಗೆಯಲ್ಲಿ ನೀರು ಎಷ್ಟು ತೆಳ್ಳಗೆ ಹರಿಯುತ್ತೆ ಎಂದರೆ ಯಾರು ಬೇಕಾದರು ಪಂಚೆ ನೆನೆಯದ ಹಾಗೆ ಎಲ್ಲಿ ಬೇಕಾದರೂ ದಾಟಬಹುದು. ಬಸವನಮಡು, ಕಲ್ಲುಕೊಂಡ, ಗೌರಿಗುಂಡಿ ಇವೆಲ್ಲ ಈಗ ಹೆಸರುಗಳಷ್ಟೇ. ಅಲ್ಲಿ ಈಗ ಉಂಡಿಗಳು ಇಲ್ಲ, ಮಡುವೂ ಇಲ್ಲ. ಮರಳು ಹೀಗೆ ತುಂಬಿಕೊಳ್ಳುತ್ತಾ ಬಂದರೆ ಬೇಸಿಗೆಯಲ್ಲಿ ಹೇಮಾವತಿ ನದಿಯಲ್ಲಿ ನೀರು ಹರಿಯುವುದೇ ಮುಂದೆ ನಿಲ್ಲಬಹುದು. ಬಯಲು ಸೀಮೆಯ ನದಿಗಳ ಹಾಗೆ ಮಳೆ ಬಂದಾಗ ಮಾತ್ರ ಕೆಲವು ಕಾಲ ಹರಿಯುವ ನದಿಗಳ ದಾರಿಯಲ್ಲಿ ಮಲೆನಾಡಿನ ಈ ಜೀವನದಿಗಳೂ ಇರುವ ಹಾಗೆ ಕಾಣುತ್ತೆ. ಎಲ್ಲೋ ಕಟ್ಟಿದ ಅಣೆಕಟ್ಟಿನ ದೆಸೆಯಿಂದ ನಮ್ಮೂರಿನ ಹೇಮಾವತಿ ಮರಳಿನಿಂದ ಹುಗಿದು ಹೋಗುತ್ತದೆಂದು ನಾನು ಕನಸಿನಲ್ಲೂ ತಿಳಿದಿರಲಿಲ್ಲ"16 ಎಂಬ ಮಾತಿನಲ್ಲಿ ವಿಷಾದದ ಛಾಯೆಯೊಂದು ಕಾಣಿಸುತ್ತದೆ. ಯಾವುದನ್ನು ಮನುಷ್ಯ ಪ್ರಗತಿ, ಅಭಿವೃದ್ಧಿ ಎಂದು ಕರೆಯುತ್ತಾನೆಯೋ ಅವೆಲ್ಲವು ಒಂದಲ್ಲ ಒಂದು ರೀತಿ ಪರಿಸರಕ್ಕೆ ಅನಾನುಕೂಲವಾಗೇ ಪರಿಣಮಿಸಿರುವುದನ್ನು ನೋಡಬಹುದಾಗಿದೆ.

ಇದೇ ರೀತಿಯಾಗಿ ತೇಜಸ್ವಿಯವರು ತಮ್ಮ "ಪರಿಸರದ ಕತೆ"ಗಳಲ್ಲಿ ಹೇಳುವ ಮಾತುಗಳು ಮುಖ್ಯವೆನಿಸುತ್ತವೆ. "ಈಗ ಕಾಡುಗಳಿಲ್ಲ, ಕಾಡು ಪ್ರಾಣಿಗಳಿಲ್ಲದ ಪರಿಸರವು ಶ್ಮಶಾನಕ್ಕಿಂತ ಭೀಕರವಾಗಿ ಕಾಣುತ್ತದೆ....... ಕಾಡುಗಳನ್ನು ನಾಶಮಾಡಿದಾಗ ಅಲ್ಲಿರುವ ಪ್ರಾಣಿಗಳನ್ನು, ಅವುಗಳ ಪರಿಸರವನ್ನು ಧ್ವಂಸ ಮಾಡಿದಾಗ ರಹಸ್ಯ, ಗೌಪ್ಯ, ಅದ್ಭುತಗಳ ನಿರಂತರ ನಿಧಿಯೊಂದನ್ನು ನಮ್ಮ ಕಿರಿಯ ಜನಾಂಗ ಕಳೆದುಕೊಂಡಂತಾಗಿ ಮನಸ್ಸು ಖಿನ್ನವಾಗುತ್ತದೆ. ಈ ದುರಂತದ ದುಃಖವನ್ನು ಅಂಕಿ ಸಂಖ್ಯೆಗಳ ಆಧಾರದ ಮೇಲೆ, ಸಿದ್ಧಾಂತಗಳ ಮುಖಾಂತರ ವಿಶ್ಲೇಷಿಸಿ, ಪರಿಸರ ಸಂರಕ್ಷಣೆಯ ಬಗ್ಗೆ ಜನಗಳಿಗೆ ಹೇಳಲು ಮನಸ್ಸೇ ಬರುವುದಿಲ್ಲ. ಏಕೆಂದರೆ, ನಾನು ಕಂಡಂತೆ ಕಾಡನ್ನು ಕಂಡಿಲ್ಲದ, ಅನುಭವಿಸಿಲ್ಲದ ಮನಸ್ಸುಗಳಿಗೆ ನನ್ನ ಮನಸ್ಸಿನ ದುಗುಡವನ್ನು ನಿರ್ಜೀವ ಅಂಕಿ ಸಂಖ್ಯೆಗಳ ವಿಶ್ಲೇಷಣೆ ಮುಖಾಂತರ ಹೇಳಿ ಪ್ರತಿಸ್ಪಂದನ ಉಂಟು ಮಾಡುವುದು ಕಷ್ಟಸಾಧ್ಯ"[17] ಎಂಬೀ ಮಾತುಗಳು ಹಾಗೆ ಅವರ 'ಹೆಜ್ಜೆ ಮೂಡದ ಹಾದಿ' ಎಂಬ ಪದ್ಯದಲ್ಲಿ ಬರುವ ಒಂದು ಸಂದರ್ಭದಲ್ಲಿ ತೇಜಸ್ವಿಯವರು "ನಮ್ಮ ತೋಟದಲ್ಲಿರುವ ಮೂರು ನಾಲ್ಕು ಕೋಳಿ ಉಳಿಸಲು ಇಷ್ಟೊಂದು ಜನರನ್ನು ಮೈಮೇಲೆ ಹಾಕಿಕೊಂಡು

ದಿನಂಪ್ರತಿ ಹಗರಣ ಮಾಡಬೇಕಾಯ್ತಲ್ಲಾ ಎಂದು ಎಲ್ಲದರ ಮೇಲೂ ಬೇಸರ ಬಂತು. ನಮ್ಮ ಬೇಲಿಯೊಳಗೆ ಬದುಕುತ್ತಿದ್ದ ನಾಲ್ಕಾರು ಕೋಳಿಗಳಿಗೆ ರಕ್ಷಣೆ ಕೊಡಲು ಸಾಧ್ಯವಾಗದಿದ್ದ ನಾನು ಸಹ್ಯಾದ್ರಿ ಕಾಡುಗಳ, ಹಿಮಾಲಯ ಕಾಡುಗಳ ಯೋಗಕ್ಷೇಮ ನೋಡುವವನಂತೆ ಮಾತಾಡುವುದು ನಿಸ್ಸಹಾಯಕ ಕ್ಷುದ್ರ ಜೀವಿಯೊಬ್ಬನ ಬೂಟಾಟಿಕೆಯಂತೆ ಕಂಡಿತು"[18] ಈ ಮಾತುಗಳು ನಶಿಸಿಹೋಗುತ್ತಿರುವ ಕಾಡುಗಳು, ಕಾಡುಪ್ರಾಣಿ-ಪಕ್ಷಿಗಳ ಬಗೆಗೆ ಕಾಳಜಿಯನ್ನು ತೋರಿಸುತ್ತಲೇ ಅವುಗಳನ್ನು ರಕ್ಷಿಸಲು ಅಸಮರ್ಥನಾದ ತನ್ನ ನಿಸ್ಸಹಾಯಕತೆಯನ್ನು ಇಂತಹ ಅಮೂಲ್ಯ ನಿಧಿಯನ್ನು ಮುಂದಿನ ಪೀಳಿಗೆಯವರು ನೋಡಲು ಸಾಧ್ಯವಾಗದ ರೀತಿಯಲ್ಲಿ ನಿರ್ನಾಮ ಮಾಡುತ್ತಿರುವ ವ್ಯವಸ್ಥೆಯೊಂದರ ಬಗೆಗೆ ಕೋಪ, ತಿರಸ್ಕಾರಗಳನ್ನು ಅಭಿವ್ಯಕ್ತಿಸುತ್ತಿರುವುದನ್ನು ನೋಡಬಹುದಾಗಿದೆ.

ನಾಟಿ ವೈದ್ಯಪದ್ಧತಿ ಇಂದು ಅವನತಿಯ ಹಾದಿ ಹಿಡಿದು ನಮ್ಮಿಂದ ದೂರಾಗಿರುವುದಕ್ಕೆ ಕಾರಣಗಳನ್ನು ಇವರು ಚರ್ಚಿಸಿದ್ದಾರೆ. ಅತ್ಯಮೂಲ್ಯವಾದ ಔಷಧಿಯ ಗುಣಗಳನ್ನೊಂದಿರುವ ವನಸಂಪತ್ತು, ಅದರ ಉಪಯೋಗಗಳ ಅರಿವಿರುವ ವ್ಯಕ್ತಿಗಳು ನಮ್ಮ ನಡುವೆಯೇ ಇದ್ದರೂ ಅವರ ಸಂಪೂರ್ಣ ಉಪಯೋಗ ಪಡೆಯಲು ಸಾಧ್ಯವಾಗುತ್ತಿಲ್ಲ. ಯಾವುದೋ ಮೂಢನಂಬಿಕೆಯೋ, ಸ್ವಾರ್ಥವೋ ಅಥವಾ ನಿರಾಸಕ್ತಿಯೋ ಇಂತಹದಕ್ಕೆ ಮೂಲಕಾರಣವಾಗಿದೆ. ಜನಪದರಲ್ಲೂ ಇರಬಹುದಾದ ಇಂತಹ ಜ್ಞಾನನಷ್ಟವಾಗುತ್ತಿರುವುದರ ಬಗೆಗೆ ಈ ಇಬ್ಬರೂ ಲೇಖಕರೂ ಅಸಮಾಧಾನ ವ್ಯಕ್ತಪಡಿಸುತ್ತಾರೆ. ತೇಜಸ್ವಿಯವರ 'ಪರಿಸರದ ಕತೆ'ಗಳಲ್ಲಿ ಮೂಲಿಕೆ ಬಳ್ಳಿಯ ಸುತ್ತ ಎಂಬ ಭಾಗದಲ್ಲಿ ಇಂತಹದ್ದೊಂದು ಸಂದರ್ಭ ಬರುತ್ತದೆ. ಅಲ್ಲಿ ಯಾವುದೋ ಒಂದು ಮೂಲಿಕೆ ಬಳ್ಳಿಯನ್ನು ತೋರಿಸಿ ಮಾರ ಕ್ಲುಪ್ತವಾದೊಂದು ವ್ಯಾಧಿಗೆ ಇದು ಔಷಧಿ ಎಂದು ಕಟ್ಟುಕತೆಯೊಂದನ್ನು ಹೇಳಿ ಅಲ್ಲಿದ್ದ ಮರವೊಂದಕ್ಕೆ ಅದನ್ನು ಬಿಗಿದು ಕಟ್ಟುತ್ತಾನೆ. ಆದರೆ ತೇಜಸ್ವಿಯವರಿಗೆ ಮಾರನ ಕಟ್ಟುಕತೆಗಳ ದೆಸೆಯಿಂದ ಸತ್ಯಾಸತ್ಯತೆಗಳ ಬಗೆಗೆ ತಿಳಿಯದಾದಾಗ ಈ ಪರಿಸ್ಥಿತಿ ಇವತ್ತು ಮಾರನ ಹೇಳಿಕೆಗಳಿಗೆ ಮಾತ್ರವಲ್ಲ, ಇಡೀ ಭಾರತೀಯ ನಾಟಿ ವೈದ್ಯಪದ್ಧತಿಗೆ ಹಿಡಿದಿರುವ ಪೀಡೆ ಎಂದು ಟೀಕಿಸಿ ಆ ವಿಷಯನ್ನು ಅಲ್ಲಿಗೇ ಬಿಟ್ಟುಬಿಡುತ್ತಾರೆ. ಮತ್ತೊಂದು ಬಾರಿ ಇಂತಹದ್ದೇ ಘಟನೆಗೆ ತೇಜಸ್ವಿ ಮುಖಾಮುಖಿಯಾಗುತ್ತಾರೆ. ಈ ಸಾರಿ ಅಪ್ಪಣ್ಣ ಆ ಬೀಳನ್ನು ಕಟ್ಟುತ್ತಿದ್ದಾಗ ಅದರ ಉಪಯೋಗವೇನೆಂದು ಅವನಿಗೂ ಗೊತ್ತಿರಲಿಲ್ಲ. ಆದರೆ ಇದರ ಎಲೆಯ ರಸವನನು ಹಾಲಿಗೆ ಹಿಂಡಿದರೆ ಗಟ್ಟಿಯಾಗುತ್ತದಂತೆ ಎಂದಷ್ಟನ್ನು ಮಾತ್ರ ಹೇಳುತ್ತಾನೆ. ಕುತೂಹಲಗೊಂಡು ಅದರ ಎಲೆಗಳನ್ನು ಒಯ್ದು ಗೆಳೆಯ ಫೆಥಾಲಜಿಸ್ಟ್ ಚಂದ್ರು ಹತ್ತಿ ಪ್ರಯೋಗಕ್ಕೆಂದು ತೆಗೆದುಕೊಂಡು ಹೋಗಿ ಅಪ್ಪಣ್ಣ ಹೇಳಿದ ರೀತಿಯಲ್ಲೇ ಮಾಡಿದಾಗ ಸ್ವಲ್ಪ ಹೊತ್ತಿನಲ್ಲೇ ಹಾಲು ರಬ್ಬರಿನಂತೆ ಗಟ್ಟಿಯಾಗಿತ್ತದೆ. ಪಾತ್ರೆ ಮಗುಚಿದಾಗ ಪಾತ್ರೆಯಾಕಾರದ ಎರಕದಂತಿದ್ದ ಗಟ್ಟಿಗಡ್ಡೆ ಹೊರಗಡೆ ಬರುತ್ತದೆ. ಆಗ ಇದಕ್ಕೆನೋ

ಮಹತ್ವದ ಗುಣ ಇರಬಹುದೆಂದು ಗಮನಿಸಿ ನಂತರ ಅದನ್ನು ಕಂಡವರೆಲ್ಲ ಮಾರನಂತೆ "ಬಿದ್ದಿರು ಅಲ್ಲಿ" ಎಂದು ಅದನ್ನು ಸಮೀಪದ ಗಿಡಗಳಿಗೆ ಹಿಡಿದು ಬಿಗಿಯುವವರೇ ಹೊರತು ಇಂಥದಕ್ಕೆ ಔಷಧಿ ಎಂದು ಅದರ ಗಂಟು ಬಿಚ್ಚಿ ಒಯ್ದಿದ್ದನ್ನು ನೋಡಲಿಲ್ಲ"[19] ಎಂದು ಆ ಬೀಳಿನ ಅವಸ್ಥೆಯನ್ನು ಕುರಿತು ಹೇಳುತ್ತಾರೆ.

ಹೀಗೆಯೇ ಇನ್ನೊಮ್ಮೆ ತೇಜಸ್ವಿಯವರ ಬಳಿ ಕೆಲಸ ಮಾಡುತ್ತಿದ್ದ ಕೃಷ್ಣ ಎಂಬಾತ ಖಾಯಿಲೆ ಬಿದ್ದಾಗ ಮೂಲವ್ಯಾಧಿ ಇರಬೇಕೆಂದು ಶಂಕಿಸಿ ಇದಕ್ಕೆ ಶಸ್ತ್ರಚಿಕಿತ್ಸೆಯೊಂದೇ ಪರಿಹಾರ ಎಂದುಕೊಳ್ಳುತ್ತಾರೆ. ಆದರ ಕೃಷ್ಣ ತನಗೆ ತಿಳಿದಿದ್ದ ಮಲೆಯಾಳಿ ಸನ್ಯಾಸಿಯ ಬಳಿ ಹೋದಾಗ ತ್ರಾಣವಿಲ್ಲದ ಆ ಸನ್ಯಾಸಿ ಔಷಧಿ ಬಳ್ಳಿಯ ಲಕ್ಷಣಗಳನ್ನು ವಿವರಿಸಿ ಅದನ್ನು ಉಪಯೋಗಿಸುವ ಪದ್ಧತಿಯನ್ನು ಹೇಳುತ್ತಾನೆ. ಅದು ಅಂದು ಮಾರ, ಅಪ್ಪಣ್ಣ ಮರಕ್ಕೆ ಕಟ್ಟುತ್ತಿದ್ದ ಬಳ್ಳಿಯೇ ಆದ್ದರಿಂದ ಅದನ್ನು ಹುಡುಕಿ ತೆಗೆದು ಉಪಯೋಗಿಸುತ್ತಾನೆ. ಆ ಔಷಧಿಯನ್ನು ಬಳಸಿದ ಒಂದೇ ಹೊತ್ತಿಗೆ ಕೃಷ್ಣನ ಮೂಲವ್ಯಾಧಿ ಶಮನವಾಗುತ್ತದೆ. ಆದರೆ ತೇಜಸ್ವಿ ಇದಕ್ಕೆಲ್ಲ ಸಾಕ್ಷಿಯಾಗುತ್ತಾರೆಯೇ ಹೊರತು ನಿರ್ಣಯವನ್ನು ನೀಡುವುದಿಲ್ಲ. ಆ ಸಂದರ್ಭದಲ್ಲಿ ಅವರ ಮಾತುಗಳು ಹೀಗಿವೆ. "ಮನುಷ್ಯ ದೇಹದಲ್ಲಿ ಉಂಟಾಗುವ ಗಡ್ಡೆಗಳಲ್ಲಿ ಅನೇಕ ತರದವು ಇವೆ. ಇವುಗಳಲ್ಲಿ ಕೆಲವು ಗಡ್ಡೆಗಳ ಮೇಲೆ ಮಾತ್ರ ಮೂಲಿಕೆ ಬಳ್ಳಿ ಪ್ರಭಾವ ಬೀರಬಹುದು. ಇವುಗಳನ್ನೆಲ್ಲಾ ಯಾರು ಸಂಶೋಧಿಸುವವರು? ಮಾರನಂಥವರಿಗೆ ಸಂಶೋಧಿಸಿ ಆಗಬೇಕಾದ್ದು ಏನೂ ಇಲ್ಲ. ಮಲಯಾಳಿ ಸನ್ಯಾಸಿ ಸಹ ವೃದ್ಧಾಪ್ಯದ ನಿತ್ರಾಣದಿಂದ ಕೃಷ್ಣನಿಗೆ ಬಳ್ಳಿ ವಿವರಿಸಿ ಹೇಳಿ ಅದರ ಗಡ್ಡೆ ಅಗೆದು ತೆಗೆದುಕೋ ಎಂದು ಹೇಳಿದನೇ ಹೊರತು, ಇಲ್ಲದಿದ್ದರೆ ಅವನೇ ಹೋಗಿ ಗೋಪ್ಯವಾಗಿ ಗಡ್ಡೆ ಅಗೆದು ತಂದುಕೊಡುತ್ತಿದ್ದ. ಈ ನಾಟಿ ವೈದ್ಯರ ಬಲವಾದ ಒಂದು ನಂಬಿಕೆ ಎಂದರೆ ಔಷಧಿ ಯಾವುದೆಂದು ಹೇಳಿಬಿಟ್ಟರೆ ಔಷಧಿಯ ಗುಣ ನಷ್ಟವಾಗಿ ಬಿಡುತ್ತೆ ಎನ್ನುವುದು. ಈ ನಂಬುಗೆಯ ದೆಸೆಯಿಂದ ಇಂದು ಭಾರತದ ನಾಟಿ ವೈದ್ಯಪದ್ಧತಿಯೇ ನಷ್ಟವಾಗುವುದರಲ್ಲಿದೆ"[20] ಈ ಮಾತುಗಳು ನಾಟಿವೈದ್ಯ ಪದ್ಧತಿಯ ಅಳಿವಿಗೆ ಕಾರಣಗಳನ್ನು ಗುರುತಿಸುವಲ್ಲಿ ಸಮರ್ಥವಾಗಿದೆ.

ಬಿ.ಜಿ.ಎಲ್.ಸ್ವಾಮಿಯವರು ಸಹ ಕೆಲವೊಂದು ಔಷಧಿಗುಣಗಳನ್ನು ಹೊಂದಿರುವ ಮರ-ಗಿಡಗಳ ಬಗ್ಗೆ ಅರಿವಿರುವ ವೆಳತ್ತಪಿಳ್ಳೆ, ಮರುಂದುವನ್ನು ಗುರುತಿಸುತ್ತಾರೆ. ಹಾಗೆಯೇ ಇವರನ್ನು ಗುರುಸ್ಥಾನದಲ್ಲಿಟ್ಟು ಅವರಿಂದ ಕಲಿಯಬೇಕಾಗಿರುವುದು ಬಹಳಷ್ಟಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಆದರೆ ಈ ನಿಟ್ಟಿನಲ್ಲಿ ಮುಂದುವರೆದು ಸಂಶೋಧಿಸಿ ಕಂಡುಹಿಡಿಯುವ ಪ್ರವೃತ್ತಿಯಾಗಲಿ, ಉತ್ಸಾಹವಾಗಲಿ ನಮ್ಮ ವಿಜ್ಞಾನಿಗಳಲ್ಲಿ, ಸಂಶೋಧಕರಲ್ಲಿ ಇಲ್ಲದಿರುವ ಬಗ್ಗೆ ವಿಷಾದಿಸುತ್ತಾರೆ. ಇಂತಹ ಸಂದರ್ಭದಲ್ಲೇ ತಮ್ಮ ಪೂರ್ವಜನರನ್ನು ಅವರ ಪದ್ಧತಿಗಳನ್ನು

ಉತ್ಪ್ರೇಕ್ಷಿಸುವವರ ಮುಂದೆ ತಮ್ಮ ಪ್ರಶ್ನೆಗಳನ್ನು ಇಡುತ್ತಾರೆ. "ಛೆ ಛೆ ನಮ್ಮ ಆಯುರ್ವೇದದಲ್ಲಿ ಬೇಕಾದಷ್ಟು ಮೂಲಿಕೆಗಳನ್ನು ಹೆಸರಿಸಿದ್ದಾರೆ. ಸಂಜೀವಿನಿ ಎಂಬ ಮೂಲಿಕೆಯಂತೂ ಸತ್ತವರನ್ನು ಬದುಕಿಸುವಂತಹದ್ದು! ಧನ್ವಂತರಿಗಳಿದ್ದ ದೇಶದಲ್ಲಿ ಯಾವ ಮದ್ದು ತಾನೇ ಇಲ್ಲ!" ಎಂದು ಉದ್ಗಾರ ತೆಗೆಯುವವರಿಗೆ ನನ್ನ ಅರಿಕೆ ಇಷ್ಟೇ; ಹೌದು, ಚರಕ, ಸುಶ್ರುತ, ವಾಗ್ಭಟ ಮೊದಲಾದವರ ಗ್ರಂಥಗಳಲ್ಲಿ ಅನೇಕ ಗಿಡಗಳ ಹೆಸರುಗಳಿವೆ; ಅನೇಕ ವ್ಯಾಧಿಗಳ ಹೆಸರುಗಳಿವೆ; ವ್ಯಾಧಿಗಳಿಗೆ ಔಷಧ ರೂಪಕವಾದ ಪ್ರಯೋಗಗಳಿವೆ ಒಪ್ಪಿಕೊಳ್ಳುತ್ತೇನೆ. ಆ ಗಿಡ ಮೂಲಿಕೆಗಳು ಯಾವುವು? ಎಲ್ಲಿ ಬೆಳೆಯುತ್ತವೆ? ಅವು ಹೇಗಿರುತ್ತವೆ? ಅವುಗಳನ್ನು ಗುರುತು ಹಿಡಿಯುವ ಬಗೆ ಹೇಗೆ? ಮೇಲೆ ಉದಾಹರಿಸಿರುವ ಗ್ರಂಥಕಾರರಿಗೆ ಗೊತ್ತಿದ್ದ, ಅವರವರ ಕಾಲದಲ್ಲಿ ಬಳಕೆ ಬಂದು ನಿಂತಿದ್ದ ಮೂಲಿಕೆಗಳನ್ನು, ರೋಗಗಳನ್ನು ಮಾತ್ರ ಅವರು ಪ್ರಸ್ತಾಪಿಸಿದರು. ಕಳೆದ ಒಂದು ಸಾವಿರ ವರ್ಷಗಳಿಂದ ಈಚೆಗೆ ಹೊಸ ರೋಗಗಳೇ ಕಾಣಿಸಿಕೊಂಡಿಲ್ಲವೇ? ನಮ್ಮ ಭೂಗೋಳಜ್ಞಾನ ವಿಸ್ತರಿಸಿಲ್ಲವೇ? ಕಾಡನ್ನು ಭೇದಿಸಿಕೊಂಡು ಹೋಗುವುದಕ್ಕೆ ಬೇಕಾದ ವಾಹನ ಸೌಕರ್ಯಗಳು ಕೈಗೆ ಎಟುಕುವಂತಿಲ್ಲವೇ? ಇವೆಲ್ಲವು ಇದೆ. ಆದರೆ ಹಳೆಯದನ್ನು ಈ ಕಾಲಕ್ಕೆ ತಕ್ಕಂತೆ ಪರಿಶೋಧಿಸಬೇಕೆಂಬ ಹಂಬಲವಾಗಲಿ, ಹೊಸತನ್ನು ಕಂಡು ಹಿಡಿದು ವಿಜ್ಞಾನ ಪ್ರಗತಿ ರಾಷ್ಟ್ರಗಳೊಂದಿಗೆ ಕಾಲು ಹಾಕಬೇಕೆಂಬ ಕುತೂಹಲವಾಗಲಿ ನಮಗೆ ಇರುವಂತೆ ಕಾಣದು"[21] ಎಂದು ಇಲ್ಲಿಯವರ ನಿರಾಸಕ್ತಿ, ಸೋಮಾರಿತನವನ್ನು ಟೀಕಿಸುತ್ತಾರೆ.

'ಹಸುರುಹೊನ್ನು' ಕೃತಿಯಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವು ಇದೆ. ನಮ್ಮ ಸಂಪತ್ತಿನ ಬಗೆಗೆ ನಮ್ಮ ದೇಶದಲ್ಲೇ ಇಲ್ಲದ ಆಸಕ್ತಿ, ಉತ್ಸಾಹಗಳು ಪಾಶ್ಚಾತ್ಯರಲ್ಲಿದೆ. ಅವರು ಇಲ್ಲಿನ ಗಿಡಮೂಲಿಕೆಗಳ ಬಗ್ಗೆ ಸಂಶೋಧನ ಕಾರ್ಯ ನಡೆಸಿ ಆ ಬಗ್ಗೆ ಕೊಂಚ ಸುಳಿವು ಸಿಕ್ಕರೂ ಅದನ್ನು ಬೆಂಬತ್ತಿ ತಮಗೆ ಬೇಕಾದ ರೀತಿಯಲ್ಲಿ ಬಳಸಿಕೊಂಡು ಲಾಭಗಳಿಸುವುದಲ್ಲದೇ, ಅದರ ಕುರುಹು ಸಿಗದ ಹಾಗೆ ನಾಶ ಮಾಡಿಬಿಡುತ್ತದೆ. ಇದಕ್ಕೆ ಉತ್ತಮ ಉದಾಹರಣೆಯೊಂದು ಈ ಕೃತಿಯಲ್ಲಿ ದೊರೆಯುತ್ತದೆ. 'ಸರ್ಪಗಂಧಿ' 'ರುವುಲ್ಫಿಯ ಸರ್ಪೆಂಟೈನ' ಎಂಬ ಸಸ್ಯದಲ್ಲಿನ ಔಷಧಿಯ ಗುಣಗಳನ್ನು, ಅದರ ಉಪಯೋಗಗಳನ್ನು ತಮ್ಮ ಸಂಶೋಧನೆಯ ಮೂಲಕ ಖಚಿತಪಡಿಸಿಕೊಂಡ ಪಾಶ್ಚಿಮಾತ್ಯ ವಿಜ್ಞಾನಿಗಳು ಭಾರತದ ಕಾಡುಗಳಲ್ಲಿ ಹೇರಳವಾಗಿದ್ದ ಸಸ್ಯವನ್ನು ನೆಲಸಮ ಮಾಡಿದ ರೀತಿಯನ್ನು ನೋಡಬಹುದಾಗಿದೆ. ಬಿ.ಜಿ.ಎಲ್.ಸ್ವಾಮಿಯವರು ಈ ಅಂಶಗಳನ್ನು ಗುರುತಿಸುವ ಹಾಗೆಯೇ ನಮ್ಮ ದೇಶದಲ್ಲಿರುವ ಅದೆಷ್ಟೋ ರಾಮನಾಯಕರಂತಹ ಜನರಿಂದ ಎಷ್ಟೊಂದು ಗಿಡಮೂಲಿಕೆಗಳು ಮೂಲೆಗುಂಪಾಗಿ ನಶಿಸಿ ಹೋಗುತ್ತಿದೆ ಎಂಬುದನ್ನು ತಿಳಿಸುತ್ತಾರೆ. ಇಂತಹ ಜನರಲ್ಲಿ ನಿರಾಸಕ್ತಿ, ಸೋಮಾರಿತನಕ್ಕಿಂತ ಹೆಚ್ಚಾಗಿ ಸ್ವಾರ್ಥ ಕೆಲಸ ಮಾಡುವುದನ್ನು ಇಲ್ಲಿ ಗಮನಿಸಬಹುದಾಗಿದೆ.

ಈ ಮೇಲಿನ ಎಲ್ಲ ಅಂಶಗಳನ್ನು ನೋಡಿದ ಮೇಲೆ ತೇಜಸ್ವಿಯವರು 'ಪರಿಸರದ ಕತೆ'ಗಳಲ್ಲಿ ಹೇಳುವ ಈ ಮಾತು ಮುಖ್ಯವೆನಿಸುತ್ತದೆ. ಮನುಷ್ಯ ಚಂದ್ರಮಂಡಲಕ್ಕೆ ಹೋಗಿ ಬಂದರೂ, ಕ್ಷುದ್ರ ಬುದ್ಧಿ, ಅಂಧಶ್ರದ್ಧೆಗಳನ್ನು ಮೀರಲು ಸಾಧ್ಯವಾಗಿಲ್ಲ. ಮನುಷ್ಯನಲ್ಲಿರುವ ಅಂಧಶ್ರದ್ಧೆ, ಸ್ವಾರ್ಥಗಳು ಅನೇಕ ಸಂಪತ್ತನ್ನು ನಮ್ಮಿಂದ ವಂಚಿಸಿರುವ ಹಾಗೆಯೇ ಅದೇ ಕ್ಷುದ್ರಬುದ್ಧಿ ಅಮೂಲ್ಯವಾದದ್ದನ್ನು ಇಲ್ಲವಾಗಿಸುತ್ತಿದೆ.

ವಿನೋದಪ್ರಜ್ಞೆ ತೇಜಸ್ವಿಯವರಲ್ಲಿ ಕಂಡುಬರುವ ಮತ್ತೊಂದು ಪ್ರಮುಖ ಅಂಶವಾಗಿದೆ. ಈ ವಿನೋದಪ್ರಜ್ಞೆ ಇಡೀ ವ್ಯವಸ್ಥೆಯನ್ನು, ಮನುಷ್ಯನ ವಿಚಿತ್ರ ವರ್ತನೆಗಳನ್ನು ವಿಡಂಬಿಸುವ ನೆಲೆಯಲ್ಲಿ ರೂಪುಗೊಂಡಿದೆ. ತೇಜಸ್ವಿಯವರ ವಿನೋದ ಕಲೆಯನ್ನು ಸರಿಯಾದ ರೀತಿ ಸಂಗ್ರಹಿಸಿದವರಲ್ಲಿ ಚಂದ್ರಶೇಖರ ನಂಗಲಿಯವರು ಒಬ್ಬರು. ಇವರು ಲಂಕೇಶ್, ತೇಜಸ್ವಿಯವರಲ್ಲಿ ಕಂಡು ಬರುವ ಈ ವಿನೋದ ಕಲೆಯನ್ನು ಟೀಕಿಸಿದಾಗ ಪ್ರತಿಕ್ರಿಯಿಸಿರುವ ರೀತಿಯೂ ಮುಖ್ಯವಾಗುತ್ತದೆ. ಆ ಮಾತುಗಳು ಹೀಗಿವೆ. "ವಿನೋದ ಕಲೆಯ ಜೀವಾಳ ಮತ್ತು ಮಹತ್ವವನ್ನು ಬಲ್ಲವರಾರು ಮೇಲಿನಂತೆ ಮಾತನಾಡಲಾರರು! ಹಾಸ್ಯ ಮತ್ತು ವಿನೋದಗಳ ಮೂಲಕ ಗಂಭೀರ ಉತ್ಕೃಷ್ಟ ಕೃತಿಗಳನ್ನು ಕೊಡಬಹುದೆಂಬುದನ್ನು ಸಿನಿಮಾ ಮೂಲಕ ಚಾಪ್ಲಿನ್ ಹಾಗೂ ರಂಗಭೂಮಿ ಮೂಲಕ ಬ್ರೆಕ್ಟ್ ಮಾಡಿ ತೋರಿಸಿದ್ದಾರೆ. ಚಾಪ್ಲಿನ್ ಮತ್ತು ಬ್ರೆಕ್ಟ ಅವರ ಕೃತಿಗಳನ್ನು ಸಾಂಪ್ರದಾಯಿಕವಾದ ಅಣಕು, ಹಾಸ್ಯ, ವಿವಿಧ ವಿನೋದಾವಳಿ ಎಂಬ ಮಾತುಗಳಿಂದ ವಿಮರ್ಶಿಸಲು ಸಾಧ್ಯವಿಲ್ಲ. ದುರಂತ ಮತ್ತು ವಿನೋದಗಳೆರಡರ ಬೆಸುಗೆಯಂತೆ ಕಂಡುಬರುವ ಈ ಬಗೆಯ ಕಲಾತ್ಮಕ ಪರಿಪಾಕವನ್ನು ಇಂಗ್ಲೀಷ್‌ನಲ್ಲಿ ಟ್ರಾಜಿಕ್ಕಾಮೆಡಿ – ದುರಂತವೈನೋದಿಕ ಎಂದು ಕರೆದಿದ್ದಾರೆ. ಕಲಾವಿದನ ತಟಸ್ಥ ತಲ್ಲೀನತೆಯ ಗುಣವನ್ನು ಮೈಗೂಡಿಸಿಕೊಂಡವನಿಗೆ ಮಾತ್ರ ತನ್ನನ್ನು ತಾನೇ ಹಾಸ್ಯ ಮಾಡಿಕೊಳ್ಳುವ ಶಕ್ತಿಯೊಂದಿಗೆ ಪ್ರತಿಯೊಂದು ವಸ್ತು ವಿಷಯವನ್ನು ಪರೀಕ್ಷಿಸುವ ಕಲೆ ಸಿದ್ಧಿಸುತ್ತದೆ. ಈ ದೃಷ್ಟಿಯಿಂದ ನೋಡಿದರೆ ತೇಜಸ್ವಿಯವರ ಕರ್ವಾಲೋತ್ತರ ಕೃತಿಗಳು ಟ್ರಾಜಿಕ್ಕಾಮಿಡಿಗಳು– ದುರಂತವೈನೋದಿಕಗಳು ಎಂದೇ ಕರೆಸಿಕೊಳ್ಳುತ್ತವೆ"[22] ಎಂದು ಹೇಳುತ್ತಾ ತೇಜಸ್ವಿಯವರು ಈ ಬಗ್ಗೆ ಸಂದರ್ಶನವೊಂದರಲ್ಲಿ ಹೇಳುವ ಮಾತುಗಳನ್ನು ಗುರುತಿಸುತ್ತಾರೆ. "ನನ್ನ Sense of humour ಕೆಲವು ಸಾರಿ Cloudy ಮಾಡಿಬಿಡುತ್ತದೆ. ಅದು ಅರ್ಥವಾಗೋದಿಲ್ಲ. ಎಲ್ಲ ನಗಾಡ್ಕೊಂಡು ನಗಾಡ್ಕೊಂಡು ಮುಂದಕ್ಕೆ ಹೋಗಿಬಿಡ್ತಾರೆ...... ಚಾರ್ಲಿ ಚಾಪ್ಲಿನ್ ಸಿನಿಮಾ ಥರಾ ಆಗುತ್ತೆ ಅವನು ಅತ್ಯಂತ tragic truth ನ ಹೇಳ್ತಾ ಇರ್ತಾನೆ. ನಾವು ಹೊಟ್ಟೆ ಹುಣ್ಣಾಗುವ ಹಾಗೆ ನಕ್ಕೊಂಡು ಆಚೆ ಬರ್ತೀವಿ ಆ ಥರಾ ಆಗುತ್ತೆ."[23] ತೇಜಸ್ವಿಯವರ ಈ ಮಾತುಗಳು ತನ್ನ ವಿನೋದಕಲೆಯ ಹಿಂದಿರುವ ಮಹತ್ವದ ವಿಷಯಗಳತ್ತ ನಮ್ಮ ಗಮನ ಹರಿಯುವಂತೆ ಮಾಡುತ್ತದೆನ್ನಬಹುದು.

ಬಿ.ಜಿ.ಎಲ್.ಸ್ವಾಮಿಯವರಲ್ಲೂ ಈ ರೀತಿಯಾದ ವಿನೋದಪ್ರಜ್ಞೆ ಇರುವುದನ್ನು ನೋಡಬಹುದು. ಗಾರ್ದಭಪುರಾಣದ ಸಂದರ್ಭದಲ್ಲಿ, ವಿದ್ಯಾರ್ಥಿಗಳ ಸಸ್ಯ ಸಂಗ್ರಹಣದ ಸಂದರ್ಭದಲ್ಲಿ, ಕಾಡಿನ ಅಸಮರ್ಪಕ ರಕ್ಷಣಾ ವ್ಯವಸ್ಥೆಯನ್ನು ತೋರಿಸುವ ಸಂದರ್ಭದಲ್ಲಿ ಹೀಗೆ ಕೃತಿಯ ಉದ್ದಕ್ಕೂ ನವಿರಾದ ಹಾಸ್ಯ, ಲೇವಡಿಯೊಂದಿಗೆ ಮುಂದುವರಿಯುತ್ತದೆ. ಆದರೆ ಈ ವಿನೋದ ಕಲೆ ಇಬ್ಬರೂ ಲೇಖಕರಲ್ಲೂ ಸಹಜ ಶೈಲಿಯಲ್ಲೇ ಮೂಡಿಬರುವುದನ್ನು ನೋಡಬಹುದಾಗಿದೆ.

"ಅಧಿಕಾರಕೇಂದ್ರಗಳೊಡನೆ ತೇಜಸ್ವಿಯವರು ಸ್ಥಾಪಿಸಿಕೊಳ್ಳುವ ಸಂಬಂಧದ ಸ್ವರೂಪವನ್ನು ಕೆಲ ಉದಾಹರಣೆಗಳ ಮೂಲಕ ಪರಿಶೀಲಿಸುವ ಪ್ರಯತ್ನ ಮಾಡಬಹುದು. ಅವರು ಪ್ರತ್ಯಕ್ಷವೂ ಸೇರಿದಂತೆ ಯಾವ ಪ್ರಮಾಣಗಳ ನೆರವನ್ನು ಬಳಸಿಕೊಳ್ಳುವುದಿಲ್ಲ. ಎದುರಿಗೆ ನಡೆಯುತ್ತಿರುವ ಕಾರಣಕ್ಕೆ ಅವುಗಳನ್ನು ವಾಸ್ತವವೆಂದು ಭಾವಿಸಲಾಗದು. ಅಂತಹ ಒಂದು ಜಿಜ್ಞಾಸೆ ಪುಂಗಿ ಎಂಗ್ಟ ಪುಂಗಿ ಊದಿ ಹಲವಾರು ಹಾವುಗಳನ್ನು ಕಣ್ಣೆದುರೇ ಹಿಡಿದಾಗ ಉಂಟಾಗುತ್ತದೆ. ಇನ್ನು ಪ್ರಶ್ನಾತೀತ ಪ್ರಮಾಣವೆಂದು ಅವರು ಯಾವುದನ್ನೂ ಮಾನ್ಯ ಮಾಡಿದ್ದಿಲ್ಲ. ಅವರು ಮುಂದಿಡುತ್ತಿದ್ದ ಲೋಹಿಯಾವಾದವೂ ಇದಕ್ಕೆ ಹೊರತಲ್ಲ. ಭಾರತೀಯ ಕಾವ್ಯಮೀಮಾಂಸೆಯು ತಾನೇ ಒಂದು ಪ್ರಶ್ನಿಸಲಾಗದ ಶಬ್ದ ಪ್ರಮಾಣವೆಂದು ಹಕ್ಕನ್ನು ಮಂಡಿಸುತ್ತಿರುವ ಈ ಹೊತ್ತಿನಲ್ಲಿ ಪ್ರಮಾಣಗಳನ್ನು ನಿರಾಕರಿಸಿ ಮಾತನಾಡುವುದು, ಬರೆಯುವುದು ಸಾಮಾನ್ಯ ಸಂಗತಿಯಲ್ಲ. ಅದರ ಹಿಂದಿರುವುದು ಧಾರ್ಮಿಕತೆಯ ಪ್ರಶ್ನೆಯಷ್ಟೇ ಅಲ್ಲ; ಬದಲಿಗೆ ಬಹು ಎಚ್ಚರದ ಸಾಂಸ್ಕೃತಿಕ ರಾಜಕಾರಣವೊಂದನ್ನು ಎದುರು ಹಾಕಿಕೊಳ್ಳಬೇಕಾಗಿರುತ್ತದೆ"[24]

ಹಾವು ಹಿಡಿಯುವ ಎಂಗ್ಟನ ಅವಸಾನದೊಂದಿಗೆ ಭಾರತದ ಕಾಡುಗಳು ಅಲ್ಲಿನ ಜೀವಿಗಳು ಅವಸಾನ ಹೊಂದುತ್ತಿರುವುದರ ಚಿತ್ರಣವನ್ನು ತೇಜಸ್ವಿ ನಮ್ಮ ಮುಂದಿರಿಸುವ ಬಗೆ ಅಚ್ಚರಿ ಮೂಡಿಸುತ್ತದೆ. ಏಕೆಂದರೆ ಇದು ಕತೆಯೊಳಗೆ ಇರುವ ಕತೆಯಲ್ಲ. ವಾಸ್ತವ ಚಿತ್ರಣವೊಂದು ಇಲ್ಲಿ ರೂಪುಗೊಂಡಿದೆ. ಎಂಗ್ಟ ಪುಂಗಿ ಊದಿ ಹಾವು ಹಿಡಿಯುವ ಘಟನೆಯಲ್ಲಿ ತಮಗೆ ಮೋಸ ಮಾಡಿದ್ದಾನೆಂದು ಶಂಕಿಸಿ "ನಾನು ಅವನ ಮೋಸವನ್ನು ಬಯಲು ಮಾಡಬೇಕೆಂದು ಕಾಯುತ್ತಿದ್ದಾಗ ಒಮ್ಮೆ ನನಗೆ ಸಕಲೇಶಪುರದಲ್ಲಿ ಕಂಡ. ರಸ್ತೆ ಪಕ್ಕ ಏನೇನೋ ಗಿಡಮೂಲಿಕೆಗಳನ್ನು ರಾಶಿ ಹಾಕಿಕೊಂಡು ತುರುಗಜ್ಜಿ, ಇಸಬು, ಹಾವು ಕಚ್ಚಿದಕ್ಕೆ, ಎಂದು ಭಾಷಣ ಬಿಗಿದು ಮಾರುತ್ತಿದ್ದ. ಅವನ ಪಕ್ಕದಲ್ಲಿ ಹದ ಹಾಕಿದ ಹಾವಿನ ಚರ್ಮಗಳು ಉದ್ದಕ್ಕೆ ಹಾಸಿದ್ದವು. ವಿದೇಶೀ ಪ್ರವಾಸಿಗರಿದ್ದಲ್ಲಿ ಮಾತ್ರ ಅದಕ್ಕೆ ಗಿರಾಕಿಗಳು ಎಂಗ್ಟನನ್ನು ದೂರದಿಂದ ನೋಡಿದಾಗ ಪಾಪ ಎನ್ನಿಸಿತು. ನಾಗರೀಕತೆ ಮುಂದುವರಿಯುತ್ತಾ ಎಂಗ್ಟನ ಕುಲಕಸುಬುಗಳು, ಕೈಚಳಕಗಳು ನಿಧಾನವಾಗಿ ನಿರುಪಯುಕ್ತವಾಗುತ್ತಿದ್ದವು. ಸರ್ಕಾರ ಹಾವಿನಚರ್ಮವನ್ನು ರಫ್ತು ಮಾಡುವುದು ನಿಷೇಧಿಸಿದ ಮೇಲೆ ಅವನ ಚರ್ಮಗಳಿಗೆ ದುಡ್ಡು ಸಿಗುತ್ತಿರಲಿಲ್ಲ. ಅವನ ಚಕ್ರಾಣಿ ಬೇರು, ಚಿತ್ರಮೂಲದ ಬೇರು,

ಸರ್ಪಗಂಧಿ, ಅಳಲೇಕಾಯಿಗಳು ವಿಲಾಯಿತ ಔಷಧದ ಎದುರು ಗಿರಾಕಿ ಕಳೆದುಕೊಂಡಿದ್ದವು. ಮೊದಲಿನಂತೆ ಮೊಲ, ಕವುಜಗನಹಕ್ಕಿ, ನೀರುನಾಯಿಗಳನ್ನೂ ಬೇಟೆಯಾಡುವುದಕ್ಕೂ ಅರಣ್ಯ ಇಲಾಖೆಯವರು ಅವಕಾಶ ಕೊಡುತ್ತಿರಲಿಲ್ಲ. ಎಂಗ್ಟನಿಗೆ ಮನಸ್ಸಿನಾಳದಲ್ಲಿ ತಾನು ಪರಕೀಯನಾಗುತ್ತ, ಏಕಾಂಗಿಯಾಗುತ್ತ ಇರುವುದರ ಅರಿವಿದ್ದಿರಬಹುದು. ಅವನು ತನ್ನೆಲ್ಲ ಚಾಕಚಕ್ಯತೆ ಚಾಲಾಕುಗಳನ್ನು ಉಪಯೋಗಿಸಿ ಜನರನ್ನು ರಂಜಿಸಿ, ನಂಬಿಸಿ, ನಿದ್ದೆ ಮಾಡುತ್ತಿದ್ದ ದಾಸರ ಹಾವಿನ ಎದುರು ಪುಂಗಿ ಊದಿ, ಊಟ ಸಂಪಾದನೆ ಮಾಡಲು ಹೆಣಗುತ್ತಿದ್ದುದನ್ನು ನೋಡಿ ಜನರು ಬಯ್ದರೂ ತಾಳ್ಮೆಯಿಂದ ಸಹಿಸಿಕೊಂಡು ಉತ್ತರಿಸುತ್ತಿದ್ದುದನ್ನು ನೋಡಿದ್ದೇನೆ. ಭಾರತದ ಕಾಡುಗಳು, ಮೃಗಪಕ್ಷಿಗಳು, ನದಿಝುರಿಗಳು, ತಾಳ್ಮೆಯಿಂದ ತಮ್ಮ ಅವಸಾನವನ್ನು ಕಾಯುತ್ತಿರುವಂತೆಯೇ ಎಂಗ್ಟನೂ ಕಾಯುತ್ತಿದ್ದ. ಇತಿಹಾಸ ಎಂದೋ ಅವನ ಭವಿಷ್ಯನ್ನು ತೀರ್ಮಾನ ಮಾಡಿತ್ತು ಸೋಲಲೇ ಬೇಕಾದ ಯುದ್ಧ ಒಂದರಲ್ಲಿ ಗುದ್ದಾಡುತ್ತಾ ಬೀದಿ ಬದಿಯಲ್ಲಿ ಅವನು ನಿಂತಿದ್ದ"[25] ಇಂಥ ಸಂದರ್ಭಗಳಲ್ಲೇ ತೇಜಸ್ವಿಯವರನ್ನು ಬೇರೆ ಯಾವ ಲೇಖಕನಿಗೂ ಹೋಲಿಸಲು ಸಾಧ್ಯವಿಲ್ಲವೆನಿಸುತ್ತದೆ. ಎಂಗ್ಟ ಇಲ್ಲಿ ಬರೀ ಕಾಲ್ಪನಿಕ ಪಾತ್ರವಲ್ಲ. ಜೀವಂತ ಪಾತ್ರ, ಇವನ ಜೀವನದ ಅಳಿವು, ಉಳಿವಿನ ಜೊತೆಗೆ ಪರಿಸರ ಅಳಿವಿನ ಅಂಚಿಗೆ ತಲುಪುತ್ತಿರುವುದನ್ನು ಒಟ್ಟಾಗಿ ಗ್ರಹಿಸಿರುವ ಕ್ರಮ ಗಮನಾರ್ಹವಾದುದಾಗಿದೆ.

ತೇಜಸ್ವಿಯವರ ಕೃತಿಗಳು ಇಷ್ಟು ಮೌಲಿಕವಾಗಿರಲು ಬಹುಶಃ ಅವರು ತನ್ನ ಪರಿಸರದಲ್ಲಿ ಪಡೆದ ಅನುಭವಗಳಿಂದಲೇ ಎನ್ನಬಹುದು. ಇಲ್ಲಿ ಬರುವ ಪ್ರತಿಯೊಂದು ಪಾತ್ರಗಳು ಯಾವುದೋ ದಾರುಣ ಸತ್ಯವೊಂದನ್ನು ಎತ್ತಿ ತೋರಿಸುತ್ತಿರುತ್ತದೆ. ಸಾಮಾನ್ಯ ಎಂದು ಕರೆಯುವುದರಲ್ಲೂ ಇರಬಹುದಾದ ವೈಶಿಷ್ಟ್ಯತೆಯನ್ನು ನೋಡಿ 'ಸಾಮಾನ್ಯ' ಎಂಬ ಪದವೇ ಅರ್ಥಕಳೆದುಕೊಳ್ಳುತ್ತದೆ. ಸ್ಥಳೀಯ ಕಾಡಿನ ಅಲ್ಲಿನ ಪ್ರಾಣಿಗಳ ಅವಸಾನದ ಅನುಭವ ರಕ್ಷಣೆಯಿಲ್ಲದೆ ಬರಿದಾಗುತ್ತಿರುವ ಭಾರತದ ಕಾಡುಗಳ ಬಗೆಗೆ, ಪ್ರಾಣಿ–ಪಕ್ಷಿಗಳ ಬಗೆಗೆ ಚಿಂತಿಸುವಂತೆ ಮಾಡುತ್ತದೆ. ಪ್ರಕೃತಿಯ ಸೃಷ್ಟಿ ವೈಚಿತ್ರ್ಯಗಳು ಬೆರಗುಗೊಳಿಸುತ್ತಾ ಒಂದು ಸಣ್ಣ ಹುಳುವಿನ ಜೀವನದ ಬಗೆಗೆ ಕುತೂಹಲ ಕೆರಳಿಸುತ್ತದೆ. ನಿಗೂಢವೆನಿಸುತ್ತದೆ. ಅದೇ ಕುತೂಹಲ ಮನುಷ್ಯನಲ್ಲೂ ಅವನ ವರ್ತನೆಗಳಲ್ಲೂ ಕಾಣುತ್ತಾರೆ. ಪ್ರತಿಕ್ಷಣವೂ ಹೊಸದನ್ನು ಏನಾದರೊಂದನ್ನು ಕಾಣಬೇಕು, ತಿಳಿಯಬೇಕು ಎಂಬ ಮನಸ್ಸೊಂದು ಕೃತಿಯಲ್ಲಿ ಚಲಿಸುತ್ತಲೇ ಇರುತ್ತದೆ. ಇಲ್ಲಿ ತೇಜಸ್ವಿ ಕೇವಲ ನಿರೂಪಕನಲ್ಲ. ಒಂದು ಪಾತ್ರನಾಗುತ್ತಾರೆ. ಅಲ್ಲಿ ನಡೆಯುವ ಘಟನೆಗಳಿಗೆ ಸಾಕ್ಷಿಯಾಗುತ್ತಾರೆ.

ತೇಜಸ್ವಿಯವರ 'ಪರಿಸರದ ಕತೆ'ಗಳಲ್ಲಿ ಬರುವ 'ಕಾಳಪ್ಪನ ಕೋಬ್ರ' ಕತೆಯಲ್ಲಿ ನಗರದ ಜೀವನಶೈಲಿಯ ಆಕರ್ಷಣೆಗೊಳಗಾಗಿ ಅಲ್ಲೇ ನೆಲೆಕಂಡುಕೊಳ್ಳಲು ಬಯಸುವ ಮನಸ್ಸುಗಳಿಗೆ ಪ್ರತಿನಿಧಿಯಂತೆ ಕಾಳಪ್ಪ ಕಂಡುಬರುತ್ತಾನೆ. ನಗರದಲ್ಲಿನ ಜವಾನಿಕೆಯ ಶ್ರೇಷ್ಠತನವನ್ನು ಈತ ಹಳ್ಳಿಯ

ಸ್ವತಂತ್ರ ಬೇಸಾಯದ ಜೀವನದಲ್ಲಿ ಕಂಡುಕೊಳ್ಳಲಾರ. ಈತ ನಗರದ ಜೀವನಕ್ಕೆ ಎಷ್ಟು ಯಾಂತ್ರೀಕೃತವಾಗಿ ಒಗ್ಗಿರುತ್ತಾನೆಂದರೆ ಅವನ ಎಲ್ಲಾ ಸಹಜ ವರ್ತನೆಗಳ ಮೇಲೂ ಅದು ಹಿಡಿತವನ್ನು ಸಾಧಿಸಿರುತ್ತದೆ. ಅವನನ್ನು ಮೊದಲ ಭೇಟಿಯಾದ ಸಂದರ್ಭವಿದು. "ಒಮ್ಮೆ ಜನ್ನಾಪುರಕ್ಕೆ ನಡೆದು ಹೋಗುತ್ತಿರಬೇಕಾದರೆ ಯಾರೋ ಒಬ್ಬಾತ ಟ್ಯಾಕ್ಸಿ ಡ್ರೈವರುಗಳು ಹಾಕಿಕೊಳ್ಳುವ ಹ್ಯಾಟು, ಚರ್ಮದ ಜರ್ಕಿನ್‌ಕೋಟು, ಜೀನ್ಸ್ ಪ್ಯಾಂಟ್, ಬಿಸಿಲು ಕನ್ನಡಕ ಎಲ್ಲ ಧರಿಸಿ ಎತ್ತಿನಗಾಡಿ ಹೊಡೆದುಕೊಂಡು ಬರುತ್ತಿರುವ ಈತನನ್ನು ನೋಡಿ ನನಗೆ ಅಚ್ಚರಿಯಾಯ್ತು. ಗಾಡಿ ನನ್ನ ಹತ್ತಿರಕ್ಕೆ ಬಂದುದೇ ತಡ ಮೂಗುದಾರ ಜಗ್ಗಿ ಗಾಡಿ ನಿಲ್ಲಿಸಿದ ಆತ ಚಂಗನೆ ಗಾಡಿಯಿಂದ ಕೆಳಗೆ ನೆಗೆದು ಒಂದು ಮಿಲಿಟರಿ ಸೆಲ್ಯೂಟು ಹೊಡೆದ. ತೆಳ್ಳಗೆ ಬಿಳಿಚಿಕೊಂಡು ಕೀಚಲು ದನಿಯಲ್ಲಿ ಮಾತಾಡುತ್ತಿದ್ದ ಇವನು ಯಾರೆಂದು ನನಗೆ ಗೊತ್ತಾಗಲಿಲ್ಲ. ಗಾಡಿ ಹೊಡೆಯುತ್ತಿದ್ದಾತ ತಾನೇ ಬೊಂಬಾಯಿಯಲ್ಲಿ ಕೆಲಸಕ್ಕಿರುವ ಕಾಳಪ್ಪ ಎಂದು ಹೇಳಿದ. ಬೊಂಬಾಯಿಯ ಸಂಸ್ಕೃತಿಯನ್ನು ಈ ಕಗ್ಗಾಡಿನ ಹಳ್ಳಿಯವರೆಗೆ ಸರಿಯಾಗಿ ಮನವರಿಕೆ ಮಾಡಿಕೊಡಲೆಂದೇ ಬಿರುಬೇಸಿಗೆಯಲ್ಲೂ ಅಲ್ಲಿಂದ ತಂದ ಚರ್ಮದ ಉಡುಪುಗಳನ್ನು, ಕಪ್ಪು ಕನ್ನಡಕವನ್ನು ಹಾಕಿಕೊಂಡು ಅವನು ಗಾಡಿ ಹೊಡೆಯುತ್ತಿದ್ದುದು"[26] ಲೇಖಕರ ಈ ವಿವರಗಳಿಂದಲೇ ಕಾಳಪ್ಪನಿಗೆ ನಗರದ ಅಲ್ಲಿನ ಸಂಸ್ಕೃತಿಯ ವ್ಯಾಮೋಹ ಎಷ್ಟಿದೆ ಎಂಬುದು ತಿಳಿಯುತ್ತದೆ. ಕಾಳಪ್ಪನ ಮಾತು ವರ್ತನೆಗಳಿಂದ ಕುತೂಹಲಗೊಂಡಿದ್ದ ತೇಜಸ್ವಿ ಅವನು ಕ್ಲಬ್‌ನಲ್ಲಿ 'ಬಾಲ್‌ಬಾಯ್' ಕೆಲಸದಲ್ಲಿರುವುದನ್ನು ಹೇಳಿ ನಿರಾಸೆಗೊಂಡು ಇಲ್ಲಿ ನಿಮ್ಮ ತಂದೆಗೆ ಸ್ವಂತ ಗದ್ದೆಗಳಿರಬೇಕಾದರೆ ಅದು ನೋಡಿಕೊಂಡಿರುವುದನ್ನು ಬಿಟ್ಟು ಇದ್ಯಾವ ಮಹಾ ಕೆಲಸವೆಂದು ಬಾಲ್‌ಬಾಯ್ ಕೆಲಸಕ್ಕೆ ಹೋಗಿದ್ದೀಯ ಎಂದು ಟೀಕಿಸುತ್ತಾರೆ.

ಆದರೆ ಕಾಳಪ್ಪನ ಮಾತು ಅವರನ್ನು ಬೆಚ್ಚಿ ಬೀಳಿಸುತ್ತದೆ. "ಕ್ಲಬ್‌ನ ಜವಾನಿಕೆ ಅಂತ ನೀವು ಉದಾಸೀನ ಮಾಡಬೇಡಿ ಸರ್! ಎಂತೆಂಥ ದೊಡ್ಡ ದೊಡ್ಡ ಅಫೀಸರುಗಳೆಲ್ಲ ಅಲ್ಲಿ ಆಟಕ್ಕೆ ಬರ್ತಾರೆ, ಪರಿಚಯ ಆಗುತ್ತಾರೆ ಗೊತ್ತಾ, ಚೀಫ್ ಮಿನಿಸ್ಟರ್, ಡೆಪ್ಯುಟಿಕಮಿಷನರ್ ಎಲ್ಲ ಬಂದು ಆಟ ಆಡ್ತಾರೆ. ಬಾಲು ಎತ್ತಿಕೊಟ್ಟಿದ್ದಕ್ಕೆ ತಗಾ ಹಿಡಿ ಅಂತ ಎಷ್ಟೊ ಸಾರಿ ನನಗೆ ಇನಾಮು ಕೊಟ್ಟಿದ್ದಾರೆ ಸರ್! ಇಲ್ಲಿ ಗದ್ದೆ ಮಾಡಿ ಮೈಕೈ ಎಲ್ಲಾ ಕೆಸರು ಮಾಡಿಕೊಳ್ಳದಷ್ಟೇ ಬೊಂಬಾಯಿಯಲ್ಲಿ ಬೀಡಾ ಮಾಡೋವನ ಇಷ್ಟಗಲ ಹರಿವಾಣದಲ್ಲಿ ಬರೋ ಉತ್ಪತ್ತಿ ನಮ್ಮಪ್ಪನ ನಾಲ್ಕು ಎಕರೆ ಗದ್ದೆಯಲ್ಲಿ ಬರೋದಿಲ್ಲ. ಇಲ್ಲಿ ವರ್ಷವೆಲ್ಲ ದುಡಿದರೂ ಅಲ್ಲಿ ನನಗೆ ಒಂದು ತಿಂಗಳಿಗೆ ಸಿಗೋ ದುಡ್ಡು ಇಲ್ಲಿ ಸಿಗೋಲ್ಲ"[27] ಎಂದು ಹೇಳುತ್ತಾನೆ. ಆದರೆ "ಪೇಟೆಯಿಂದ ಹಳ್ಳಿಗೆ ಬಂದು ವ್ಯವಸಾಯ ಆರಂಭಿಸಿದ ನನಗೆ ಅವನು ಈ ರೀತಿ ವ್ಯವಸಾಯವನ್ನು ಬಾಲ್‌ಬಾಯ್ ಕೆಲಸಕ್ಕಿಂತ ಕೀಳಾದ್ದುದೆಂದು ಹೇಳಿದ್ದು ಹಿಡಿಸಲಿಲ್ಲ. ಆದರೂ ನನಗೆ ದಿಗಿಲಾಗುವಂತೆ ಅವನು ಭಾರತದ ಯಾವುದೋ ಧಾರುಣ ಸತ್ಯ ತಿಳಿಸುತ್ತಿರುವಂತೆನಿಸಿತು"[28]

ಇಲ್ಲಿ ತೇಜಸ್ವಿ ಮತ್ತು ಕಾಳಪ್ಪ ಇಬ್ಬರನ್ನು ಮುಖಾಮುಖಿಯಾಗಿಸಿದಾಗ ಇಬ್ಬರ ಅಭಿಪ್ರಾಯ, ಮನೋಧರ್ಮಗಳ ನಡುವೆ ಘರ್ಷಣೆ ಉಂಟಾಗುವುದನ್ನು ನೋಡಬಹುದು. ಯಾರ ಹಂಗೂ, ಭಯ, ಬೈಗುಳಗಳ ಕಾಟವಿಲ್ಲದೆ ಸ್ವತಂತ್ರ ಜೀವನ ನಡೆಸಬೇಕೆಂಬ ಹಂಬಲದಿಂದ ನಗರದ ಜೀವನದಿಂದಾಗಿ ಪಾರಾಗಿ ಬಂದು ಹಳ್ಳಿಯಲ್ಲಿ ನೆಲೆಸಿ ಬೇಸಾಯದಲ್ಲಿ ತೊಡಗಿರುವ ತೇಜಸ್ವಿಯವರ ನಿಲುವು ಧೋರಣೆಗಳು ಒಂದುಕಡೆಯಾದರೆ, ಸ್ವಂತ ಭೂಮಿಯನ್ನು ಹೊಂದಿದ್ದವರು ನಗರದ ಜವಾನಿಕೆಯ ಕೆಲಸವೇ ದೊಡ್ಡದು, ಅದೇ ನಿಜವಾದ ಜೀವನವೆಂದು ಸ್ವತಂತ್ರ ಬದುಕನ್ನು ಹೀಗೆಳೆದುಕೊಳ್ಳುವ ಕಾಳಪ್ಪ ಇನ್ನೊಂದು ಕಡೆ ಇವರಿಬ್ಬರ ಅಭಿಪ್ರಾಯಗಳಲ್ಲಿ ಸರಿ ತಪ್ಪುಗಳ ನಿರ್ಣಯ ಇಲ್ಲಿ ಮುಖ್ಯವಲ್ಲ. ಆದರೆ ಕಾಳಪ್ಪ ರೈತರ ಬದುಕಿನ ಸೋಚನೀಯ ಸ್ಥಿತಿಯನ್ನು, ದಾರುಣ ಸತ್ಯವೊಂದನ್ನು ಹೇಳುತ್ತಿರುವುದು ನಮಗಿಲ್ಲಿ ಮುಖ್ಯವೆನಿಸುತ್ತದೆ.

ಬಿ.ಜಿ.ಎಲ್.ಸ್ವಾಮಿಯವರು 'ಹಸುರುಹೊನ್ನು' ಕೃತಿಯಲ್ಲಿ ನಮ್ಮ ಭಾರತೀಯ ಶಿಕ್ಷಣ ವ್ಯವಸ್ಥೆಯ ಲೋಪದೋಷಗಳನ್ನು, ಶಿಕ್ಷಣದಲ್ಲೂ ರಾಜಕೀಯದ ಹಸ್ತಕ್ಷೇಪ ತರುತ್ತಿರುವ ತೊಂದರೆಗಳನ್ನು, ವಿಜ್ಞಾನ ಸಂಶೋಧನ ಸಂಸ್ಥೆಗಳ ದುರವಸ್ಥೆಯನ್ನು ವಿವರಿಸುತ್ತಾ ಟೀಕಿಸುವುದನ್ನು ನೋಡಬಹುದು. ಸ್ವಾಮಿಯವರು ಸ್ವತಹ ಪ್ರಾಧ್ಯಾಪಕರಾಗಿದ್ದರಿಂದ ಅಲ್ಲಿನ ನ್ಯೂನತೆಗಳನ್ನು, ಅವ್ಯವಸ್ಥೆಯನ್ನು ತೀರ ಹತ್ತಿರದಿಂದ ಗಮನಿಸಿರುವುದರಿಂದ ಹಾಗೆಯೇ ಅನುಭವಿಸಿರುವುದರಿಂದ ಮತ್ತೆ ಮತ್ತೆ ಈ ವಿಷಯಗಳ ಬಗ್ಗೆ ಚರ್ಚಿಸುವುದನ್ನು ಕಾಣಬಹುದಾಗಿದೆ.

ಸಸ್ಯಶಾಸ್ತ್ರ ಅಧ್ಯಯನದಲ್ಲಿ ವಿದ್ಯಾರ್ಥಿಗಳಿಗೆ ಪಾಠಪ್ರವಚನಗಳಷ್ಟೇ ಮುಖ್ಯವಾದದ್ದು ಪ್ರಾಯೋಗಿಕ ಅಧ್ಯಯನ. ಈ ಅಧ್ಯಯನಕ್ಕಾಗಿ ಸಮೃದ್ಧವಾದ ಕಾಡುಗಳಿಗೆ ಪ್ರವಾಸ ಕೈಗೊಂಡು ಸಸ್ಯಗಳನ್ನು ಅದರ ಸ್ವಾಭಾವಿಕ ನೆಲೆಯಲ್ಲೇ ಅಧ್ಯಯನ ಮಾಡುವ ಕ್ರಮವೊಂದು ಜಾರಿಯಲ್ಲಿದೆ. 'ಹಸುರುಹೊನ್ನು' ಕೃತಿಯಲ್ಲಿ ಬರುವ 'ಪಸುರಕಡಲ್' ಎಂಬ ಭಾಗದಲ್ಲಿ ಈ ರೀತಿಯ ಪ್ರವಾಸ ಕೈಗೊಳ್ಳುವ ಸಂದರ್ಭದಲ್ಲಿ ಮೇಲಾಧಿಕಾರಿಗಳಿಂದ ಬರುವ ತಡೆಯಾಜ್ಞೆ, ಅದಕ್ಕೆ ಅವರು ನೀಡುವ ಕಾರಣಗಳು ಕ್ಷುದ್ರ, ಸಂಕುಚಿತ ಆಲೋಚನೆಗಳುಳ್ಳ ಅಧಿಕಾರಿಗಳ ಹೊಲಸು ರಾಜಕೀಯವನ್ನು ನಮ್ಮ ಮುಂದಿರಿಸುತ್ತದೆ. ಸ್ವಾಮಿಯವರು ಪ್ರತಿಸಲದಂತೆ ಆ ಸಲವು ಕಾರ್ಯಕ್ಷೇತ್ರದ ರೂಪುರೇಷೆಗಳನ್ನು ರೂಪಿಸಿ ಅಧಿಕಾರಿಗಳ ಒಪ್ಪಿಗೆಗೆ ಕಳುಹಿಸಿರುತ್ತಾರೆ. ಅದರಲ್ಲಿ ಕನ್ಯಾಕುಮಾರಿಯ ಅಕ್ಕಪಕ್ಕದಲ್ಲಿರುವ ಪ್ರದೇಶಗಳಿಗೆ ಮೊದಲು ತೆರಳಿ ಸಮುದ್ರದಲ್ಲಿ ಬೆಳೆಯುವ ಸಸ್ಯ ಸಂಪತ್ತನ್ನು ಕರಾವಳಿಯ ಸಸ್ಯಸಮೃದ್ಧಿಯನ್ನು ವಿದ್ಯಾರ್ಥಿಗಳಿಗೆ ಪರಿಚಯ ಮಾಡಿಕೊಟ್ಟು, ಹಿಂದಿರುಗಿ ಬರುವಾಗ ತಿರುವಾಂಕೂರು ಬಳಿಯಿರುವ ಒಂದೆರಡು ಕಾಡುಗಳಿಗೆ ಹೋಗಿ ಬರುವುದೆಂದು ಆ ವರ್ಷ ಯೋಜನೆ ಕಳುಹಿಸಿರುತ್ತಾರೆ. ಆದರೆ ಇದಕ್ಕೆ ಕಾಲೇಜಿನ ಆಫೀಸಿನಿಂದಲೇ ಪೆಟ್ಟು ಬೀಳುತ್ತದೆ. ನಂತರ ಅದು

ಮೇಲಾಧಿಕಾರಿಗಳ ಹಂತಕ್ಕೆ ಹೋಗಿ ಕೇರಳದ ರಾಜಕೀಯ ವಾತಾವರಣ ಈಗ ಸಮರ್ಪಕವಾಗಿಲ್ಲ ಇದರ ವಿಷಯವಾಗಿ ಪ್ರಾಧ್ಯಾಪಕರು ಡೈರಕ್ಟರನ್ನು ಕಂಡು ಮಾತನಾಡಬೇಕೆಂದು ಬದಲು ಬರುತ್ತದೆ. ಆದರ ಕೇರಳದ ರಾಜಕೀಯಕ್ಕೂ, ಸಸ್ಯಶಾಸ್ತ್ರಕ್ಕೂ ಇರುವ ಸಂಬಂಧವೇನು ತಿಳಿಯದಾಗಿ ತನ್ನ ಮೇಲಾಧಿಕಾರಿಗಳನ್ನು ಭೇಟಿ ಮಾಡಿದಾಗ "ಈಗ ನೋಡಿ, ಕೇರಳದಲ್ಲಿ ಕಮ್ಯುನಿಸ್ಟರು ರಾಜ್ಯ ಸೂತ್ರಗಳನ್ನು ವಹಿಸಿದ್ದಾರೆ. ಅಲ್ಲಿಯ ರೀತಿನೀತಿಗಳಿಗೂ ನಮ್ಮದಕ್ಕೂ ಅಜಗಜಾಂತರ. ಆದ್ದರಿಂದ ಮದರಾಸು ಪ್ರಾಂತ್ಯದಲ್ಲಿಯೇ ಎಲ್ಲಿಯಾದರೂ ಹೋಗಿ ಬರುವುದು ಒಳ್ಳೆಯದಲ್ಲವೇ? ಅಲ್ಲಿಯ ಸರ್ಕಾರವು ಜನವು ಕಮ್ಯುನಿಸ್ಟರು, ಕಮ್ಯುನಿಸಂ ತತ್ವವನ್ನು ಅಂಗೀಕರಿಸಿರುವವರು. ಆದ್ದರಿಂದ ನೀವು ಹುಡುಗರನ್ನು ಕರೆದುಕೊಂಡು ಹೋದಾಗ ನಿಮಗೆಲ್ಲ ಅಲ್ಲಿಯವರ ಪರಿಚಯವಾಗದೇ ಇರದು. ನಮ್ಮ ಹುಡುಗರನ್ನು ಆ ತತ್ವಗಳಿಗೆ ತಿರುಗಿಸಿಬಿಟ್ಟರೆ?"[29] ಈ ಮಾತುಗಳನ್ನೆಲ್ಲ ಕೇಳುತ್ತಿರಬೇಕಾದರೆ ಸ್ವಾಮಿಯವರಿಗೆ ಅದು ಡೈರೆಕ್ಟರ್‌ನ ಅಭಿಪ್ರಾಯವೋ, ಮಧ್ಯಸ್ಥಗಾರನಾದ ಗುಮಾಸ್ತನ ಅಭಿಪ್ರಾಯವೋ ಎಂಬ ಗೊಂದಲವು ಮೂಡುತ್ತದೆ. ಕಲಿಕೆಗೂ, ರಾಜಕೀಯಕ್ಕೂ ಸಂಬಂಧ ಕಲ್ಪಿಸಿ ವಿದ್ಯಾರ್ಥಿಗಳನ್ನು ಅವಕಾಶ ವಂಚಿತರನ್ನಾಗಿ ಮಾಡಿದ ಮೇಲಾಧಿಕಾರಿಗಳ ತೀರ್ಮಾನ ವ್ಯವಸ್ಥೆಯಲ್ಲಿರುವ ಹುಳುಕನ್ನು ಎತ್ತಿ ತೋರಿಸುತ್ತದೆ. ಈ ಸಂದರ್ಭದಲ್ಲಿ ಅವರಾಡುವ ಮಾತುಗಳೆಲ್ಲವೂ ಅರ್ಥಹೀನ ಎನಿಸುತ್ತದೆ. ಇದೇ ಸಂದರ್ಭದಲ್ಲಿ ಬಿ.ಜಿ.ಎಲ್.ಸ್ವಾಮಿಯವರು ಖಾಸಗಿ ಕಾಲೇಜೊಂದು ಕೇರಳದ ಕಾಡುಗಳಿಗೆ ಭೇಟಿಕೊಟ್ಟು ಯಾವ ತೊಂದರೆಗೀಡಾಗದೆ ಅಧ್ಯಯನ ಮುಗಿಸಿ ಬಂದಿರುವ ಸಂದರ್ಭವನ್ನು ವಿವರಿಸುತ್ತಾರೆ. ಆದರೆ ಖಾಸಗಿ ಕಾಲೇಜಿಗೆ ಇಲ್ಲದ ಅಭದ್ರತೆಯ ಅಳುಕು, ಇಲ್ಲಿ ಸರ್ಕಾರಿ ಕಾಲೇಜನ್ನು ಪೀಡಿಸುತ್ತಿದೆಯೇ ಎಂಬ ಪ್ರಶ್ನೆಯೂ ಮೂಡುತ್ತದೆ. ಕಲಿಕೆಯ ಸಂದರ್ಭದಲ್ಲೂ ತಮ್ಮ ಪ್ರಭುತ್ವವನ್ನು ಸಾಧಿಸಲೆಳಸುವ ಅಧಿಕಾರಿಗಳ ರಾಜಕೀಯ ಕುತಂತ್ರವನ್ನು ಈ ಸನ್ನಿವೇಶ ಬಿಂಬಿಸುವುದನ್ನು ನೋಡಬಹುದಾಗಿದೆ.

ಇದೇ ರೀತಿ ನಾಮಕಾವಸ್ಥೆಗೆ ಮಾತ್ರ ಸಂಶೋಧನಾ ಸಂಸ್ಥೆಯಾಗಿ ಯಾವುದೇ ಸಂಶೋಧನೆಗಳಿಲ್ಲದೆ ಸಂಶೋಧಕರಿಲ್ಲದೆ ಜಡತೆಯಿಂದ ಕೂಡಿರುವ ಸಂಸ್ಥೆಯೊಂದರ ಹಣೆಬರಹವನ್ನು ಕೃತಿಯಲ್ಲಿ ವಿವರಿಸುತ್ತಾರೆ. "ಸರ್ಕಾರದ ಮೀನುಗಾರಿಕೆ ಇಲಾಖೆಯವರು ಸುಮಾರು ಐವತ್ತು ವರ್ಷಗಳ ಹಿಂದೆ ಸಣ್ಣ ಸಂಶೋಧನಾಲಯವನ್ನು ಸ್ಥಾಪಿಸಿದರು. ಸಂಶೋಧನಾಲಯ, ವಸತಿ ಸೌಕರ್ಯ, ಮೊದಲಾದವುಗಳೆಲ್ಲ ಅಂದಿನಂತೆಯೇ ಇಂದಿಗೂ ಉಳಿದಿದೆ. ಅದು ಸ್ಥಾಪನೆಗೊಂಡಾಗ ಕೆಲಸಕ್ಕೆ ಸೇರಿದ ಕಾವಲುಗಾರನೇ ಇಂದಿಗೂ ಅದೇ ನೌಕರಿಗೆ ಅಂಟಿಕೊಂಡಿದ್ದಾನೆ. "ಏನು ಪಳನಿ, ಹೇಗಿದ್ದಿಯಾ? ಎಂದು ಕುಶಲಪ್ರಶ್ನೆ ಹಾಕಿದರೆ "ಅಯ್ಯ ಐವತ್ತು ವರ್ಷಗಳಲ್ಲಿ ದುಡಿಮೆಯಿಂದ ಮುದುಕನಾಗಿದ್ದೇನೆ. ಈ ಸಂಶೋಧನಾಲಯ ಮಾತ್ರ ಹುಟ್ಟಿದಾಗ ಹೇಗಿತ್ತೋ ಹಾಗೆಯೇ ಉಳಿದಿದೆ.

ಅದೇ ಕುರ್ಚಿ, ಅದೇ ಮೇಜು, ಅದೇ ಅಲ್ಮೇರಾಗಳು ಒಂದು ಚೂರು ಸಾಮಾನಾದರೂ ಹೊರತಾಗಿ ಬಂದಿದಿಲ್ಲ. ಆರಂಭದ ದಿನಗಳಲ್ಲಿ ಕೆಲಸ ಕೈ ತುಂಬಾ ಇತ್ತು, ಬರಬರುತ್ತಾ ಕಡಿಮೆಯಾಗಿ ಪುರುಸೊತ್ತು ಹೆಚ್ಚಾಗುತ್ತಿದೆ, ಸಿಬ್ಬಂದಿಯನ್ನು ನೇಮಿಸಿದಾಗ ಅವರು ಕೆಲಸಕ್ಕೆ ಬಂದು ಸೇರರು, ಬಂದರೂ ಒಂದೆರಡು ದಿನವಿದ್ದು ರಿಜೈನ್ ಮಾಡಿಬಿಡುತ್ತಾರೆ. ಇಲ್ಲವೇ ಬೇರೆ ಎಲ್ಲಿಗಾದರೂ ವರ್ಗ ಮಾಡಿಸಿಕೊಂಡು ಹೋಗುತ್ತಾರೆ. ಇಲ್ಲವೇ ವರ್ಷಗಟ್ಟಲೇ ರಜಾ ತೆಗೆದುಕೊಂಡು ಬಿಡುತ್ತಾರೆ. ತಿಂಗಳುಗಟ್ಟಲೆ ಯಾವ ಆಫೀಸರು ಇಲ್ಲದೇ ಬಂದ ಟಪಾಲೆಲ್ಲ ಮೂಟೆ ಮೂಟೆಯಾಗಿ ಹಾಗೆಯೇ ಬಿದ್ದಿವೆ."[30] ಎಂದು ತುಂಬಿದ ಎರಡು ಗೋಣಿಚೀಲಗಳನ್ನು ತೋರಿಸುತ್ತಾನೆ. ಇಲ್ಲಿ ಹೆಸರಿಗೆ ಮಾತ್ರ ಸಂಶೋಧನಾ ಸಂಸ್ಥೆ ಎಂಬ ಹಣೆಬರಹವನ್ನು ಹೊಂದಿ ಯಾವುದೇ ಕಾರ್ಯಗಳನ್ನು ಕೈಗೊಳ್ಳದ ನಿಷ್ಪ್ರಯೋಜಕ ಸ್ಥಿತಿಯಲ್ಲಿರುವ ಈ ಸಂಸ್ಥೆ ಇಂಥದ್ದೇ ಹಲವು ಸಂಸ್ಥೆಗಳಿಗೆ ಒಂದು ಉದಾಹರಣೆಯಷ್ಟೇ. ಇವರ ಬಗ್ಗೆ ವಿವರಿಸುತ್ತಾ ಲೇಖಕರು ಹೇಳುವ ಮಾತುಗಳಿವು. "ನಮ್ಮ ದೇಶದಲ್ಲಿ ಇಂಥ ಸಂಸ್ಥೆಗಳು ಅನೇಕವಿದೆ. ಒಬ್ಬಿಬ್ಬರು ದೂರದರ್ಶಿಗಳು ಸದುದ್ದೇಶದಿಂದ ಇಂಥ ಸಂಸ್ಥೆಗಳನ್ನು ಹೆರುತ್ತಾರೆ. ಅವರು ಬದುಕಿರುವವರೆಗೂ ಅವರ ಸ್ವಪ್ರಯತ್ನದಿಂದ ಆ ಸಂಸ್ಥೆ ಜೀವಂತವಾಗಿರುತ್ತದೆ. ದಾತೃ ಕಣ್ಮರೆಯಾದ ಮೇಲೆ ಉಭಯ ಸಂಕಟವೇರ್ಪಡುತ್ತದೆ' ಸಂಸ್ಥೆಯನ್ನು ಮುಚ್ಚುವುದಕ್ಕಿಲ್ಲ, ಇಟ್ಟುಕೊಂಡು ಬೆಳೆಸುವುದಕ್ಕಿಲ್ಲ, ಅರೆಮನಸ್ಸಿನಿಂದ ಕುಟುಕು ಜೀವನದಲ್ಲಿ ಸ್ವಲ್ಪ ಕಾಲ ತಳ್ಳುತ್ತದೆ. ಕೊನೆಗೆ ಇನ್ನಾವುದಾದರೂ ಸಂಸ್ಥೆಯ ಹೊಟ್ಟೆಯೊಳಗೆ ಅಡಗಬೇಕು ಇಲ್ಲವೇ ಅಳಿಯಬೇಕು"[31] ಇದು ಭಾರತದ ಕೆಲವು ಸಂಶೋಧನಾ ಸಂಸ್ಥೆಗಳ ಹಣೆಬರಹವನ್ನು ತಿಳಿಸುತ್ತದೆ. ಮುಂದುವರಿಯುತ್ತಾ ಸ್ವಾಮಿಯವರು "ನಮ್ಮ ಜನಕ್ಕೆ ವಿಜ್ಞಾನ ವಿಷಯದಲ್ಲಿ ಧೈರ್ಯೋತ್ಸಾಹ ಎಂಬುದು ಅಂಕುರಿಸಿಲ್ಲ ಹೀಗಾಗಿ ಪಳನಿ ಹೇಳಿದಂತೆ, ಕುಸ್ರಾಡಿ ಸಂಶೋಧನಾಲಯ ಹುಟ್ಟಿದಂತೆಯೇ ಇದೆ. ಜೀವನಾಡಿ ಮಿಡಿಯದೆ"[32] ಒಂದು ಸಂಶೋಧನಾಲಯದ ಜೀವ ಮಿಡಿಯುವುದು ಅಲ್ಲಿ ಸಂಶೋಧಕರಿದ್ದಾಗ, ಸಂಶೋಧನೆಗಳು ಉತ್ತಮ ರೀತಿಯಲ್ಲಿ ನಡೆಯುತ್ತಿದ್ದಾಗ ಮಾತ್ರ. ಆದರೆ ಇಲ್ಲಿನ ಸಂಶೋಧಕರಿಗೆ ಕಷ್ಟಗಳನ್ನನುಭವಿಸಿ, ಎಲ್ಲೋ ದೂರದಲ್ಲಿ ಕಾಡಿನ ಮಧ್ಯೆ ಇದ್ದು, ಯಾವ ಸೌಕರ್ಯಗಳೂ ಇಲ್ಲದೆ ಸಂಶೋಧಿಸುವ ಉತ್ಸಾಹ, ಧೈರ್ಯಗಳಾಗಲೀ, ಛಲವಾಗಲೀ ಇಲ್ಲದುದ್ದನ್ನು ನೋಡಬಹುದಾಗಿದೆ. ಇಲ್ಲಿನ ರಾಜಕಾರಣವು ಇದಕ್ಕೆ ಕಾರಣವೆಂದರೂ ತಪ್ಪಾಗಲಾರದು. ಏಕೆಂದರೆ ಉತ್ಸಾಹಿ ಮನಸ್ಸುಗಳನ್ನು ಇಲ್ಲವಾಗಿಸುವ ಹುನ್ನಾರುಗಳು ಸದಾ ಇಲ್ಲಿ ನಡೆಯುತ್ತಲೇ ಇರುತ್ತದೆ. ತಮ್ಮ ಅಧಿಕಾರದ ಪ್ರತಿಷ್ಠೆಯನ್ನು ಮೆರೆಯಬೇಕೆಂಬುದು ಇದಕ್ಕೆ ಕಾರಣ ಹಾಗೆಯೇ ಬೇರೆಯವರ ಕೆಲಸವನ್ನು, ಸಾಧನೆಯನ್ನು ನೋಡಿ ಅದನ್ನು ಸಹಿಸಿಕೊಳ್ಳಲಾರದ ಮನಸ್ಸುಗಳಿರುವುದು ಒಂದು ಕಾರಣವೆನ್ನಬಹುದು. ಅಂತಹ ಮನಸ್ಸುಗಳ ಹೊಲಸು ರಾಜಕಾರಣವನ್ನು ಕೃತಿಯಲ್ಲಿಯೇ ಕಾಣಬಹುದು.

ಶಿಕ್ಷಣ ಪದ್ಧತಿಯ ಬಗೆಗೆ 'ಹಸುರುಹೊನ್ನು' ಕೃತಿ ಹಲವು ಚರ್ಚೆಗಳನ್ನೊಳಗೊಂಡಿದೆ, ತೇಜಸ್ವಿಯವರು ಶಿಕ್ಷಣವನ್ನು ಬೇರೆ ರೀತಿಯಾಗಿ ಅರ್ಥೈಸಿದವರು. 'ಪರಿಸರದ ಬಗೆಗೆ ನಮ್ಮ ಮಕ್ಕಳಿಗೆ ಎಸ್.ಎಸ್.ಎಲ್.ಸಿ.ವರೆಗಾದರೂ ಸಹಜ ಅನುಭವದೊಂದಿಗೆ ಶಿಕ್ಷಣ ಕೊಡಬೇಕು ಎಂದು ಅಭಿಪ್ರಾಯ ಪಡುತ್ತಿದ್ದರು. ಹಾಗೆಯೇ ಇವರು ಅಕಾಡೆಮಿಕ್ ಶಿಕ್ಷಣಕ್ಕೆ ಸಂಪೂರ್ಣ ಶರಣಾದವರಲ್ಲ, ಅಂಕಗಳ ಬೆನ್ನೇರಿ ಓಡಿದವರೂ ಅಲ್ಲ, ಅವರು ಹೆಚ್ಚು ಕಲಿತದ್ದು ತನ್ನ ಪರಿಸರದ ಮೂಲಕ ಅಲ್ಲಿನ ಪ್ರಾಣಿ-ಪಕ್ಷಿ, ಮರಗಿಡ ತನ್ನ ಸುತ್ತಮುತ್ತಲಿನ ಪ್ರತಿಯೊಂದು ವಸ್ತುವೂ ಒದಗಿಸಿಕೊಟ್ಟ ಅನುಭವದ ಮೂಲಕ. ಇದೇ ಅವರಿಗೆ ಪಾಠಶಾಲೆಯಾಗಿತ್ತು. ಈ ಹಿನ್ನೆಲೆಯಲ್ಲಿ ಮೇಲಿನ ಮಾತು ಬಂದಿರಬಹುದು. ಪರಿಸರದಲ್ಲಿನ ಪ್ರಾಣಿ-ಪಕ್ಷಿ -ಬೆಟ್ಟಗುಡ್ಡ, ನದಿ ಇದು ಯಾವುದರ ಬಗ್ಗೆಯೂ ಅರಿವಿಲ್ಲದೆ, ಅನುಭವವಿಲ್ಲದೇ ಕೇವಲ ಪಠ್ಯಪುಸ್ತಕಗಳ ಚಿತ್ರಗಳ ಮೂಲಕ, ಅಲ್ಲಿನ ವಿವರಣೆಯ ಮೂಲಕ ಕಲಿತಂತಹ ವಿದ್ಯಾರ್ಥಿ ಹೆಚ್ಚು ಅಂಕಗಳನ್ನು ಗಳಿಸಬಹುದೇ ಹೊರತು ಕಲಿಯುತ್ತಿರುವ ವಸ್ತುವಿನ ಪೂರ್ಣ ಅರಿವು ಅವನಿಗಿರುವುದಿಲ್ಲ. ಏಕೆಂದರೆ ಅಲ್ಲಿ ಪಠ್ಯವೇ ಕೇಂದ್ರವಾಗಿರುತ್ತದೆಯೇ ಹೊರತು ಅನುಭವವಲ್ಲ. ಈ ರೀತಿಯ ಶಿಕ್ಷಣ ವ್ಯವಸ್ಥೆ ನಮ್ಮನ್ನು ಕುಬ್ಜಗೊಳಿಸುತ್ತಿರುತ್ತದೆ.

'ಹಸುರುಹೊನ್ನು' ಕೃತಿಯಲ್ಲಿ ಈ ರೀತಿಯ ಶಿಕ್ಷಣದಿಂದಾಗಿ ಕಲಿತ ವಿದ್ಯಾರ್ಥಿಗಳಲ್ಲಿ ಇರಬಹುದಾದ ಜ್ಞಾನದ ಅರಿವು ಎಷ್ಟರಮಟ್ಟಿಗಿದೆಯೆಂಬುದನ್ನು ಇಲ್ಲಿ ಕಾಣಬಹುದು. ಇಲ್ಲಿ ಬರುವ ವಿದ್ಯಾರ್ಥಿಗಳು ಸಸ್ಯಶಾಸ್ತ್ರ ವಿಷಯವನ್ನು ಕುರಿತು ಅಧ್ಯಯನ ಮಾಡುತ್ತಿರುವುದರಿಂದ ಅವರಿಗೆ ಅಧ್ಯಯನದ ದೃಷ್ಟಿಯಿಂದ ಕೆಲವೊಂದು ಕಾಡುಗಳಿಗೆ ಹೋಗಿ ಅಲ್ಲಿನ ಸಸ್ಯಗಳ ಬಗ್ಗೆ ಅವುಗಳ ಸ್ವಾಭಾವಿಕ ನೆಲೆಯಲ್ಲೇ ಅಧ್ಯಯನ ಕೈಗೊಳ್ಳಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ಬಿ.ಜಿ.ಎಲ್.ಸ್ವಾಮಿ ಪ್ರಾಧ್ಯಾಪಕರಾಗಿದ್ದರೂ ಹಲವಾರು ಪ್ರಶ್ನೆಗಳು ಅವರಿಗೆ ಕಾಡುತ್ತವೆ. ಆಗಲೇ ನಮ್ಮಲ್ಲಿನ ಶಿಕ್ಷಣ ವ್ಯವಸ್ಥೆಯ ಲೋಪ-ದೋಷಗಳು, ನ್ಯೂನ್ಯತೆಗಳು, ಅಲ್ಲಿನ ರಾಜಕಾರಣ ಎಲ್ಲದರ ಬಗ್ಗೆಯೂ ಸ್ಪಷ್ಟ ಚಿತ್ರಣ ಮೂಡಿ ವಿಡಂಬಿಸುವುದನ್ನು ಕಾಣಬಹುದು. ಆದರೆ ಎಲ್ಲಿಯೂ ಕೂಡ ಏಕಮುಖ ಧೋರಣೆಯನ್ನು ಇವರು ಅಭಿವ್ಯಕ್ತಿಸುವುದಿಲ್ಲ. ಶಿಕ್ಷಣ ವ್ಯವಸ್ಥೆಯಲ್ಲಿನ ಲೋಪ-ದೋಷಗಳಿಗೆ ಅಲ್ಲಿನ ಅಧಿಕಾರಿಗಳನ್ನು ಹೇಗೆ ಕಾರಣವನ್ನಾಗಿಸುತ್ತಾರೋ ಹಾಗೆ ಪ್ರಾಧ್ಯಾಪಕರ ಹಲವು ರೀತಿಯ ದೌರ್ಬಲ್ಯಗಳನ್ನು ತಿಳಿಸುತ್ತದೆ. ವಿದ್ಯಾರ್ಥಿಗಳಲ್ಲಿರುವ ನಿರಾಸಕ್ತಿಯನ್ನು, ಸೋಮಾರಿತನವನ್ನು ಟೀಕಿಸುತ್ತಾ ಹೋಗುತ್ತಾರೆ.

ಮೊದಲಿಗೆ ಬೋಧನಾ ವಿಧಾನದಲ್ಲಿನ ನ್ಯೂನತೆಗಳನ್ನು ತಿಳಿಸುತ್ತಾ ಸಸ್ಯಶಾಸ್ತ್ರವನ್ನು ಅಧ್ಯಯನದ ದೃಷ್ಟಿಯಿಂದ ಎರಡು ಭಾಗಗಳನ್ನಾಗಿ ವಿಂಗಡಿಸಿರುವ ಕ್ರಮವನ್ನು ವಿವರಿಸುತ್ತಾರೆ.

1. ತಾತ್ವಿಕ ಭಾಗ

2. ಪ್ರಾಯೋಗಿಕ ಭಾಗ

ಇವೆರಡೂ ಒಂದಕ್ಕೊಂದು ಪೂರಕವಾಗಿರುವ ಅಂಶವನ್ನು ತಿಳಿಸುತ್ತಾ ಇವಕ್ಕೆ ನಮ್ಮ ದೇಶದಲ್ಲಿ ನೀಡಿರಬಹುದಾದ ಪ್ರಾಮುಖ್ಯತೆಯನ್ನು, ಇಲ್ಲಿರುವ ವ್ಯವಸ್ಥೆಯನ್ನು ವಿವರಿಸುತ್ತಾರೆ. "ಪ್ರಾಯೋಗಿಕ ಅಂಗದ ಮೊದಲನೆ ಮಾರ್ಗಕ್ಕೆ ನಮ್ಮ ದೇಶದಲ್ಲಿ ಸಾಕಷ್ಟು ಗಮನ ಹರಿದಿಲ್ಲವೆಂದು ನನ್ನ ಅಭಿಪ್ರಾಯ. ವಿಜ್ಞಾನದಲ್ಲಿ ನಮಗಿಂತಲೂ ಮುಂದೆ ನುಗ್ಗಿರುವ ಹೊರನಾಡುಗಳಲ್ಲಿ ಶಾಸ್ತ್ರದ ಉಪಾಂಗಗಳಿಗೆ ಪಾಠಕ್ರಮದಲ್ಲಿಸಮತೂಕ ವ್ಯವಸ್ಥಿತಿವಾಗಿದೆ. ನಮ್ಮ ದೇಶದ ಕಾಲೇಜುಗಳಲ್ಲೂ, ವಿಶ್ವವಿದ್ಯಾಲಯಗಳಲ್ಲೂ ಪ್ರಕೃತಿ ಪಾಠಕ್ಕೆ ನಿಯತವಾಗಿರುವ ಅವಧಿ ವರ್ಷಕ್ಕೆ 10–15 ದಿನಗಳು; ಕೆಲವೆಡೆಗಳಲ್ಲಿ ಪ್ರಕೃತಿಯ ಅಧ್ಯಯನ(Field study) ಎಂದು ಮಾತ್ರ ಅಚ್ಚಾಗಿರುತ್ತದೆ. ಇನ್ನು ಕೆಲವೆಡೆಗಳಲ್ಲಿ 30 ದಿನಗಳೆಂದು ನಿರ್ದೇಶಿತವಾಗಿದ್ದರೂ ಕಾರ್ಯತಃ ನಡೆಯುವುದು 8–10 ದಿನಗಳು ಮಾತ್ರ. ಈ ಅವಧಿಯಲ್ಲಿ ಪ್ರಯಾಣವೇ ಅರ್ಧಕಾಲಾವಧಿಯನ್ನು ತೆಗೆದುಕೊಂಡು ಬಿಡುತ್ತದೆ! ಇದಕ್ಕೆ ಕಾರಣಗಳು ಅನೇಕ ಹೊತ್ತಿನ ಕೊರತೆ, ಹಣದಕೊರತೆ, ವಸತಿ ಸೌಕರ್ಯದ ಕೊರತೆ, ಪ್ರಯಾಣದ ಅಸೌಕರ್ಯ, ಇತ್ಯಾತಿ. ಇವೆಲ್ಲವೂ ಸರಿಪಡಿಸಬಹುದಾದ ಡೊಂಕುಗಳು"[33] ಎಂದು ಹೇಳುತ್ತಾ ಇವಕ್ಕಿಂತಲೂ ಮುಖ್ಯವಾಗಿರುವ ಕೊರತೆ, ನ್ಯೂನತೆಗಳನ್ನು ಗುರುತಿಸುತ್ತಾ ಹೋಗುತ್ತಾರೆ. ಆದರೆ ಮೇಲಿನ ಸಾಲುಗಳಲ್ಲಿ ಇಲ್ಲಿನ ಅವ್ಯವಸ್ಥೆಯ ಚಿತ್ರಣ ನಮಗೆ ಕಾಣಿಸುತ್ತದೆ. ಹಾಗೆಯೇ ಬೇರೆ ದೇಶಗಳಲ್ಲಿ ಇವೆರಡಕ್ಕೂ ಅಂದರೆ ತಾತ್ವಿಕ ಭಾಗ ಮತ್ತು ಪ್ರಾಯೋಗಿಕ ಭಾಗಗಳಿಗೆ ಸಮಪ್ರಮಾಣದ ಪ್ರಾಮುಖ್ಯತೆ ನೀಡಿರುವ ಅಂಶ ಮುಖ್ಯವಾದುದು. ವಿದ್ಯಾರ್ಥಿಗಳ ಕಲಿಕೆಯಲ್ಲಿ ಎರಡೂ ಮಹತ್ವದ ಪಾತ್ರವನ್ನು ವಹಿಸುತ್ತದೆ. ತಾವು ತಾತ್ವಿಕತೆಯ ಮೂಲಕ ಕಲಿತದ್ದನ್ನು ಪಾಯೋಗಿಕವಾಗಿ ಅಧ್ಯಯನ ಮಾಡಿದಾಗಲೇ ಅದರ ಪೂರ್ಣ ಮಾಹಿತಿ ಪಡೆದು, ಹೊಸ ಸಾಧ್ಯತೆಗಳ ಕಡೆ, ಹೊಸ ಆಲೋಚನೆಗಳ ಕಡೆ ಮುಂದುವರಿಯಲು ಸಾಧ್ಯವಾಗುವಂತಹದ್ದು ಶೈಕ್ಷಣಿಕ ವರ್ಷದ ಮುಕ್ಕಾಲು ಪಾಲು ಕಲಿತದ್ದನ್ನು ಪ್ರಾಯೋಗಿಕವಾಗಿ ಕಲಿಯಲು ನಮ್ಮಲ್ಲಿ ನಿಗದಿಯಾದ ಸಮಯ 30 ದಿನಗಳು. ಆದರೆ ಸರಿಯಾದ ರೀತಿಯಲ್ಲಿ ಬಳಸಿಕೊಳ್ಳುವುದು ಕೇವಲ 8–10 ದಿನಗಳು. ಅದರಲ್ಲು ಒಂದಷ್ಟು ಸಮಯ ಪ್ರಯಾಣ ಇತ್ಯಾದಿಗಳಲ್ಲಿ ಕಳೆದುಹೋಗುತ್ತದೆಯೆಂದು ಉಳಿದ ಸಮಯದಲ್ಲಿ ನಡೆದಿರಬಹುದಾದ ಅಧ್ಯಯನ ಎಷ್ಟು ಪರಿಣಾಮ ಬೀರಿರಬಹುದೆಂಬುದನ್ನು ಆಲೋಚಿಸಬೇಕಾಗುತ್ತದೆ. ಈ ರೀತಿ ಕಲಿತ ವಿದ್ಯಾರ್ಥಿಗಳಿಂದ ಏನನ್ನಾದರೂ ನಿರೀಕ್ಷಿಸಲು ಸಾಧ್ಯವೇ ಎಂಬ ಪ್ರಶ್ನೆ ಎದುರಾಗದೆ ಇರದು.

ಶೈಕ್ಷಣಿಕ ಪದ್ಧತಿಯಲ್ಲಿ ಅದನ್ನು ಅನುಷ್ಠಾನಗೊಳಿಸುವಲ್ಲಿ ಇರಬಹುದಾದ ಲೋಪ–ದೋಷಗಳನ್ನು ಗುರುತಿಸುವ ಹಾಗೆಯೇ ವಿದ್ಯಾರ್ಥಿಗಳಲ್ಲಿ ಕಂಡುಬರುವ ದೋಷಗಳನ್ನು ಈ

ಕೃತಿಯಲ್ಲಿ ಚರ್ಚಿಸಲಾಗಿದೆ. ವಿದ್ಯಾರ್ಥಿಗಳಲ್ಲಿ ಕಂಡುಬರುವ ಬೇಜವಾಬ್ದಾರಿತನ ಕೃತಿಯ ಪ್ರಾರಂಭದಲ್ಲೇ ನಮಗೆ ತಿಳಿದುಬರುತ್ತದೆ. ಪ್ರವಾಸದ ಪೂರ್ವ ತಯಾರಿಯ ಬಗ್ಗೆ ಪ್ರತ್ಯೇಕವಾದ ಶಿಕ್ಷಣವನ್ನು ಮೊದಲೇ ನೀಡಲಾಗುತ್ತದೆ. ಅಂದರೆ ಅವರ ಹಾಸುಗೆ ಹೊದಿಕೆ, ಕಾಡಿನಲ್ಲಿ ತೊಡಬೇಕಾದ ಉಡುಪು, ಅಲ್ಲಿನ ಊಟವಸತಿ, ಸಸ್ಯ ಸಂಗ್ರಹ ಕಾರ್ಯಕ್ಕೆ ಅಣಿಮಾಡಿಕೊಳ್ಳಬೇಕಾದ ಪ್ರೆಸ್ಸು, ಕರಂಡ, ಚಾಕು, ಕತ್ತರಿ ಇತ್ಯಾದಿಗಳ ಬಗೆಗೆ ಅಲ್ಲಿ ಹೇಳಬೇಕಾದರೆ ಅತ್ಯಂತ ವಿಧೇಯರಾಗಿ ಕೇಳುತ್ತ, ಡಯರಿಗಳಲ್ಲಿ ಟಿಪ್ಪಣಿಗಳನ್ನು ಬರೆದಿಟ್ಟುಕೊಳ್ಳುವ ವಿದ್ಯಾರ್ಥಿಗಳು ಅನುಷ್ಠಾನಕ್ಕೆ ತರುವ ರೀತಿ ಮಾತ್ರ ಹಾಸ್ಯಾಸ್ಪದವಾಗಿರುತ್ತದೆ. ಅವರ ಸರಕು–ಸಾಮಾನುಗಳು ತಂದೊಡ್ಡುವ ಸಮಸ್ಯೆಗಳು, ಸಮಯಪಾಲನಾಶಿಸ್ತು ಇಲ್ಲದಿರುವುದು ಗೊಂದಲದ ವಾತಾವರಣವನ್ನುಂಟು ಮಾಡುತ್ತದೆ. ಕಾಡಿನಲ್ಲಿ ಓಡಾಡಿ ಅಧ್ಯಯನ ಕೈಗೊಳ್ಳುವಾಗ ಎದುರಾಗುವ ಸಣ್ಣಪುಟ್ಟ ತೊಂದರೆಗಳನ್ನು ಎದುರಿಸಿ ಕಲಿಯಬೇಕೆನ್ನುವ ಉತ್ಸಾಹ, ಆಸಕ್ತಿಗಳು ಇಲ್ಲದೆ ಇರುವ ಅಂಶವನ್ನಿಲ್ಲಿ ಕಾಣಬಹುದು.

ಇಲ್ಲಿನ ವಿದ್ಯಾರ್ಥಿಗಳು ತರಗತಿಗಳಲ್ಲಿ ತಿಂಗಳುಗಟ್ಟಲೇ ಸಸ್ಯದ ಸ್ವರೂಪ, ಗುಣ–ಲಕ್ಷಣ, ಅವುಗಳ ಉಪಯೋಗ, ಗುರುತಿಸುವ ವಿಧಾನಗಳನ್ನು ಕಲಿತಿದ್ದರು. ಆ ಸಸ್ಯಗಳ ಮಾದರಿಗಳನ್ನು ನೋಡಿದ್ದರೂ, ಅದನ್ನು ಅದರ ಸ್ವಾಭಾವಿಕ ನೆಲೆಯಲ್ಲಿ ಗುರುತಿಸುವ ಸಂದರ್ಭದಲ್ಲಿ ಸೋಲುತ್ತಾರೆ, ಗೊಂದಲಕ್ಕೀಡಾಗುತ್ತಾರೆ. ಇಂತಹ ಹಲವಾರು ಪ್ರಸಂಗಗಳನ್ನು ಕೃತಿಯಲ್ಲಿ ನೋಡಬಹುದಾಗಿದೆ. 'ಮಾತ ಮೂದಲಿಸುವ ಮಹಾರಣ್ಯ ಸರಣಿ' ಎಂಬ ಭಾಗದಲ್ಲಿ ಕಾಡುಸುತ್ತಿ ಬಾಯಾರಿಕೆಯಿಂದ ಬಳಲಿದವರಿಗೆ ಅಲ್ಲೇ ಹರಿಯುತ್ತಿದ್ದ ಕಾಲುವೆಯನ್ನು ಕಂಡು ಸಂತೋಷವಾಗುತ್ತದೆ. ಆದರೆ ದಡದಿಂದ ಎರಡು ಅಡಿ ಕೆಳಗೆ ಹರಿಯುತ್ತಿರುವ ಪ್ರವಾಹವನ್ನು ಕೈಗೆ ಎಟುಕಿಸಿಕೊಳ್ಳುವುದು ಕಷ್ಟವಾಗಿ ನಿಸ್ಸಹಾಯಕರಾಗಿ ನಿಂತು ನೋಡುತ್ತಿರುತ್ತಾರೆ. ಅದೇ ಸಮಯದಲ್ಲಿ ಅವರ ಜೊತೆಗಿದ್ದ ವೆಳತ್ತಪಿಳ್ಳೆ ಜೊಂಡು ಗಿಡವನ್ನು ನಳಿಗೆಯನ್ನಾಗಿಸಿಕೊಂಡು ನೀರು ಕುಡಿಯುತ್ತಾರೆ. ಹುಡುಗರೆಲ್ಲರೂ ಆಶ್ಚರ್ಯಪಡುತ್ತಾರೆ. ಏಕೆಂದರೆ ಜೊಂಡುಗಿಡದ ವಿಷಯವನ್ನು ಕುರಿತು ತರಗತಿಯಲ್ಲಿ ಕಲಿತು, ಪುಸ್ತಕದಲ್ಲಿ ಓದಿದ್ದರೂ, ಅದರ ಕಾಂಡದಲ್ಲಿ ನಳಿಗೆಯಿದೆಯೆಂಬುದನ್ನು ಅರಿತಿದ್ದರೂ, ಅದನ್ನು ಸ್ಟ್ರಾ(Straw) ರೀತಿಯಲ್ಲಿ ಉಪಯೋಗಿಸಬಹುದೆಂಬುದನ್ನು ತಿಳಿದಿದ್ದರೂ, ಆ ಗಿಡವನ್ನು ಪ್ರತ್ಯಕ್ಷವಾಗಿ ಕಂಡಾಗ, ಅದರ ಉಪಯೋಗ ಅರಿವಿಗೆ ಬಾರದೆ ಹೋದದ್ದನ್ನು ಕಂಡು ತಮ್ಮನ್ನೇ ತಾವೇ ಶಪಿಸಿಕೊಳ್ಳುತ್ತಾರೆ.

ಈ ಸಂದರ್ಭದಲ್ಲಿ ಸ್ವಾಮಿಯವರು ಹೇಳುವ ಮಾತು ಬಹಳ ಅರ್ಥಪೂರ್ಣವಾಗಿದೆ. "ತರಗತಿಯೊಳಗಡೆ ಕಲಿತ ವಿಚಾರ ಸರಣಿಯೊಡನೆ (theory ) ಕಣ್ಣಾರ ಕಂಡದ್ದನ್ನು ಸಮನ್ವಯ ಪಡಿಸುವ ಶಕ್ತಿ ಅನೇಕರಿಗೆ ಇರದು ಎಂದರೆ ಅವರ ಸ್ವಭಾವಕ್ಕೆ ಬಂದದ್ದಲ್ಲ ಎಂದು ಅರ್ಥವಲ್ಲ.

ಎಲ್ಲರಿಗೂ ಸಾಮಾನ್ಯವಾಗಿ ಈ ಶಕ್ತಿ ದತ್ತವಾಗಿಯೇ ಇರುತ್ತದೆ. ಆದರೆ 'ಮರದ ಮರೆಯ ತೇಜದಂತೆ' ಗೂಢವಾಗಿರುತ್ತದೆ. ಈ ಶಕ್ತಿಯನ್ನು ಜಾಗೃತಿಗೊಳಿಸಲು ಇರುವ ಸಾಧನ ಶಿಕ್ಷಣ. ಈಗ ನಾವು ಅನುಸರಿಸುತ್ತಿರುವ ಶಿಕ್ಷಣ ಕ್ರಮವೇ ಊನವೋ, ಪರೀಕ್ಷಾಕ್ರಮವೇ ಊನವೋ, ಶಿಕ್ಷಕರ ಮನೋಧರ್ಮಲ್ಲಿನ ಊನವೋ ಅದನ್ನು ನಿರ್ಧರಿಸಿ ನೀಗುವ ಉಪಾಯಗಳನ್ನು ಕಾರ್ಯರೂಪಕ್ಕೆ ಇಳಿಸುವುದು ಸಾಧ್ಯವಾಗದೇ ಹೋಗಿದೆಯೆಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ"[34] ಈ ವಿವರಣೆಯಲ್ಲಿ ವಿದ್ಯಾರ್ಥಿಗಳನ್ನು ಮಾತ್ರ ದೋಷಕ್ಕೆ ಗುರಿಮಾಡದೆ ಒಟ್ಟಾರೆಯಾಗಿ ಶಿಕ್ಷಣ ಪದ್ಧತಿಯಲ್ಲಿರಬಹುದಾದ ದೋಷಗಳನ್ನು ಎತ್ತಿ ತೋರಿಸಲಾಗುತ್ತಿದೆ.

ಸಾರ್ಕೆಂಡ್ರ ಸಸ್ಯದ ಹುಡುಕಾಟದಲ್ಲೂ ಇಂತದ್ದೇ ಗೊಂದಲ ಉಂಟಾಗುವುದನ್ನು ನೋಡಬಹುದು. ಆ ಗಿಡದ ಬಗೆಗೆ ವಿವರಗಳನ್ನು ತಿಳಿಸಿ ಹುಡುಕಲು ಹೇಳಿದಾಗ ವಿದ್ಯಾರ್ಥಿಗಳ ಹುಡುಕಾಟದ ರೀತಿ ಸ್ವಾಮಿಯವರಿಗೆ ನಗುವಿನ ಜೊತೆಗೆ ಸಂಕಟವನ್ನು ಉಂಟು ಮಾಡುತ್ತಿತ್ತು. "ಗಿಡದ ಸೂಕ್ಷ್ಮ ವಿಶೇಷಣಗಳೊಂದನ್ನು ಗಮನಿಸದೇ ಕೈಗೆ ಸಿಕ್ಕಿದ ಎಲೆಗಳನ್ನೆಲ್ಲ ನಸುಗಿ ಹಿಸುಕಿ ಮೂಸಿನೋಡಿ 'ಥತ್' ಎಂದು ಎಸೆಯುತ್ತಿದ್ದರೇ ಹೊರತು ಗಿಡದ ಅಂಗಾಂಗಳನ್ನು ಪರೀಕ್ಷೆ ಮಾಡಿದ್ದ ಕಾಣೆ. ಹುಡುಗಿಯರು ಗುಂಪು ಗುಂಪಾಗಿ ಒಂದೊಂದು ಪೊದರಿನ ಮೇಲೆಯೂ ಹಾರಿಬಿದ್ದು ಎಲೆಗುತ್ತಿಗಳನ್ನು ಬಾಚಿಕೊಂಡು ಹಿಸುಕಿ ಚಟ್ನಿ ಮಾಡಿ ಗಿಡವನ್ನೇ ತುಳಿದುಹಾಕುತ್ತಿದ್ದರು"[35] ಈ ರೀತಿಯ ಹುಡುಕಾಟದ ಶೈಲಿ ಅವರು ಕಲಿತ ಮಾದರಿಯಲ್ಲಿ ನ್ಯೂನತೆಯನ್ನು ತೋರಿಸುತ್ತದೆ.

'ಪ್ರಕೃತಿಯ ನರ್ತನ ರಂಗಂ' ಭಾಗದಲ್ಲಿ ಬರುವ ವಿದ್ಯಾರ್ಥಿಗಳು ಸಸ್ಯಗಳನ್ನು ಗುರುತು ಹಿಡಿಯುವ ರೀತಿಯು ಸಸ್ಯವರ್ಗೀಕರಣಶಾಸ್ತ್ರದ ದುರವಸ್ಥೆಯನ್ನು ಕುರಿತು ಯೋಚಿಸುವಂತೆ ಮಾಡುತ್ತದೆ. ತಮಗೆ ಪರಿಚಯವಿರುವ, ದಿನನಿತ್ಯದ ಉಪಯೋಗದಲ್ಲಿ ಬಳಸುವ ಮೆಣಸು, ಲವಂಗಪತ್ರೆ ಗಿಡಗಳನ್ನು ಗುರುತಿಸುವ ಸಂದರ್ಭದಲ್ಲಿ ಅನುಸರಿಸುವ ವಿಧಾನ ತೀರಾ ಅವೈಜ್ಞಾನಿಕವಾಗಿ ಕಾಣಿಸುತ್ತದೆ. ಇಳವರಸ ಲವಂಗ ಪತ್ರೆಯ ಸಸ್ಯವನ್ನು ಗುರುತಿಸಲು ಎಲೆಗಳನ್ನೆಲ್ಲಾ ಚಿವುಟಿ, ಮೂಸಿ ನೋಡಿ ಕಂಡು ಹಿಡಿದರೆ, ಕಣ್ಣ ಮೆಣಸು ಕಾಯಿಗಳನ್ನು ಕಚ್ಚಿನೋಡಿ ಕಂಡು ಹಿಡಿಯುತ್ತಾನೆ. ಇವರಿಬ್ಬರನ್ನು ಸ್ವಾಮಿಯವರು ಆ ಸಂದರ್ಭದಲ್ಲಿ ಶ್ಲಾಘಿಸಿದರೂ, ವಿದ್ಯಾರ್ಥಿಗಳ ಅಜ್ಞಾನಕ್ಕೆ ಬೇಸರ ಪಟ್ಟುಕೊಳ್ಳುತ್ತಾರೆ.

ಈ ಸಂದರ್ಭದಲ್ಲೇ ಸಸ್ಯವರ್ಗೀಕರಣಶಾಸ್ತ್ರದ ದುರವಸ್ಥೆಯನ್ನು ವಿವರಿಸುತ್ತಾ ಸ್ವಾಮಿಯವರು ಹೇಳುವ ಮಾತುಗಳಿವು. "ವರ್ಗೀಕರಣ (Taxonomy) ವಿಭಾಗಕ್ಕೆ ಸಂಬಂಧಿಸಿದ ಶಾಸ್ತ್ರ ನಮ್ಮ ದೇಶದಲ್ಲಿ ಏನೇನೂ ಬೆಳೆದಿಲ್ಲ. ಕಾಲೇಜುಗಳಲ್ಲಿಯೂ, ವಿಶ್ವವಿದ್ಯಾಲಯಗಳಲ್ಲಿಯೂ ಈ ವಿಭಾಗವನ್ನು ಪಾಠ ಹೇಳಬೇಕೆಂಬ ನಿಯಮವೇನೋ ಇದೆ. ಆದರೆ ಇದನ್ನು ಸ್ವಂತವಾಗಿ ಆಸಕ್ತಿಯಿಂದ

ಅಭ್ಯಾಸ ಮಾಡಿ ಪಾಠ ಹೇಳಿಕೊಡುವ ಉಪಾಧ್ಯಾಯರೂ ಬಹುಮಂದಿ ಇಲ್ಲ, ಶ್ರದ್ಧೆಯಿಂದ ಕಲಿಯುವ ವಿದ್ಯಾರ್ಥಿಗಳೂ ಇಲ್ಲ. ಒಂದು ವೇಳೆ ಈ ವಿಭಾಗದಲ್ಲಿಯೇ ಪ್ರತ್ಯೇಕವಾದ ತರಬೇತಿ ಪಡೆದರೂ ಅಂಥ ನಿಪುಣನ ಉಪಯೋಗವನ್ನು ಪಡೆಯುವಂಥಾ ಸಂಸ್ಥೆಗಳೂ ಇಲ್ಲ, ಹುದ್ದೆಗಳೂ ಇಲ್ಲ. ಅನೇಕ ಕಾಲೇಜುಗಳಲ್ಲಿ ವರ್ಗೀಕರಣ ಶಾಸ್ತ್ರವನ್ನು ಬೋಧಿಸುವ ಹೊರೆಯು ಕಳೆದ ವರ್ಷ ತಾನೆ ಕನಿಷ್ಠಾಂಶದಲ್ಲಿ ತೇರ್ಗಡೆಯಾಗಿ ಅನುಭವವಿಲ್ಲದ ಎಳೆಯನ ಮೇಲೆ ಕೂಡುತ್ತದೆ. ಇಲ್ಲವೆ ಮೂವತ್ತು ವರ್ಷಗಳ ಹಿಂದೆ ತಾನು ವಿದ್ಯಾರ್ಥಿಯಾಗಿದ್ದಾಗ ಕಲಿತದ್ದನ್ನು ಚಾಚೂ ತಪ್ಪದೆ ಹಾಡಿದ್ದನ್ನೇ ಹಾಡಿಕೊಂಡು ಕಾಲ ತಳ್ಳಿದಾದ ಬಳಿಕ ನಾಳೆಯೋ ನಾಡಿದ್ದೋ ನಿವೃತ್ತಿಯಾಗಲಿರುವವನ ಭುಜಕ್ಕೆ ಲಗತ್ತಾಗುತ್ತದೆ. ಎಳೆಯನಿಗೆ "ನಾನು ಉಪಾಧ್ಯಾಯನಾಗಿ ಬಿಟ್ಟಿದ್ದೇನೆ. ಇನ್ನು ಮೇಲೆ ಹೇಳಿಕೊಡುವುದೊಂದೇ ನನ್ನ ಕೆಲಸ. ಹೊಸದಾಗಿ ಕಲಿಯಬೇಕಾದದ್ದೇನೂ ಇಲ್ಲ. ಒಂದು ವೇಳೆ ಹೆಚ್ಚಾಗಿ ಕಲಿತರೂ ನನ್ನ ಸಂಬಳವೇನೂ ಹೆಚ್ಚುವುದಿಲ್ಲ" ಎಂಬ ಸಿದ್ಧಾಂತದಲ್ಲಿ ಗೌರವ. ಮುದಿಯನಿಗೆ "ಇಷ್ಟು ವರ್ಷಗಳಿಂದ ಹೇಳಿಕೊಟ್ಟಿದ್ದನ್ನೇ ಕಲಿತು ವಿದ್ಯಾರ್ಥಿಗಳು ಪಾಸು ಮಾಡಿದ್ದಾರೆ. ಈ ಇಳಿವಯಸ್ಸಿನಲ್ಲಿ ರಾಮಕೃಷ್ಣ ಎಂದು ಕೊಂಡಿರಬೇಕಾದ ವಯಸ್ಸಿನಲ್ಲಿ ಹೊಸದನ್ನು ನಾನೇಕೆ ಕಲಿಯಬೇಕು, ಹೇಳಿಕೊಡಬೇಕು?" ಎಂಬ ವೇದಾಂತದಲ್ಲಿ ಅಚಲವಾದ ಭಕ್ತಿ. ಹೀಗಾಗಿ ವರ್ಗೀಕರಣ ಶಿಶು ನಮ್ಮ ದೇಶದಲ್ಲಿ ಬೆಳೆದೇ ಇಲ್ಲ"[36] ಎಂದು ನಮ್ಮ ದೇಶದಲ್ಲಿ ವರ್ಗೀಕರಣ ವಿಭಾಗ ಬೆಳೆಯದೇ ಇರುವುದಕ್ಕೆ ಕಾರಣಗಳನ್ನು ತಿಳಿಸುತ್ತಾರೆ. ವಿದ್ಯಾರ್ಥಿಗಳಲ್ಲಿ ವರ್ಗೀಕರಣದ ಬಗೆಗೆ ಸಾಕಷ್ಟು ಅರಿವು ಇಲ್ಲ ಎನ್ನುವ ಕಾರಣದಿಂದ ಅವರನ್ನೇ ಗುರಿಯನ್ನಾಗಿಸಿಕೊಳ್ಳದೆ ಅದರ ಹಿಂದಿನ ಕಾರಣಗಳನ್ನು ಶೋಧಿಸುತ್ತಾರೆ. ಕಲಿಸುವ ಅಧ್ಯಾಪಕರಲ್ಲೇ ಆ ಅರಿವು ಇಲ್ಲವೆಂದ ಮೇಲೆ ವಿದ್ಯಾರ್ಥಿಗಳು ಸ್ವಂತ ಪರಿಶ್ರಮದಿಂದ ಅದನ್ನು ಗಳಿಸಿಕೊಳ್ಳಬೇಕಾಗುತ್ತದೆ. ಆದರೆ ಅಂತಹ ಉತ್ಸಾಹ, ಆಸಕ್ತಿಗಳು ವಿದ್ಯಾರ್ಥಿಗಳಲ್ಲೂ ಇಲ್ಲದಿರುವುದನ್ನಿಲ್ಲಿ ಗಮನಿಸಬಹುದು. ಮೇಲಿನ ಸಾಲುಗಳನ್ನು ಗಮನಿಸಿದಾಗ ಎರಡು ರೀತಿಯ ಮನೋಧರ್ಮವನ್ನುಳ್ಳ ಅಧ್ಯಾಪಕರು ನಮಗೆ ಕಾಣಸಿಗುತ್ತಾರೆ. ಮೊದಲನೆಯವನು ಕಲಿಯುವಿಕೆಗೆ ಪೂರ್ಣವಿರಾಮ ಹಾಕಿ ಈಗಾಗಲೇ ಕಲಿತಿರುವುದನ್ನೇ ಕಲಿಸಿದರೆ ಸಾಕು ಎಂದು ನಿರ್ಣಯಿಸಿಕೊಂಡವನು. ಇನ್ನು ಎರಡನೆಯವನು ವಯಸ್ಸಾದ ಬಳಿಕ ಕಲಿಯುವಿಕೆ ಅನಗತ್ಯ ಅದರಿಂದ ಏನೂ ಪ್ರಯೋಜನವಿಲ್ಲವೆನ್ನುತ್ತ ಆರಾಮದ ಜೀವನ ನಡೆಸುವ ದೃಢಸಂಕಲ್ಪ ಮಾಡಿರುವವನು. ಈ ಇಬ್ಬರಲ್ಲೂ ಕಾಣಬಹುದಾದ ಸಮಾನ ಅಂಶವೆಂದರೆ ನಿರಾಸಕ್ತಿ, ನಿರುತ್ಸಾಹಗಳೇ ಇಂತಹ ಅಧ್ಯಾಪಕರಿಂದ ಏನನ್ನೂ ಹೊಸದಾಗಿ ಆಲೋಚಿಸಲು, ಸಂಶೋಧಿಸಲು ಸಾಧ್ಯವಿಲ್ಲ. ಆದ್ದರಿಂದ ವಿದ್ಯಾರ್ಥಿಗಳು ಇಂತಹವರಿಂದ ಏನನ್ನೂ ನಿರೀಕ್ಷಿಸಲಾರರು.

ಮುಂದುವರಿದು ಬಿ.ಜಿ.ಎಲ್.ಸ್ವಾಮಿಯವರು ವಿದ್ಯಾರ್ಥಿಗಳ ಅತಂತ್ರ ಸ್ಥಿತಿಯನ್ನು ಕುರಿತು ಹೇಳುತ್ತಾರೆ. "ಈಗಿನ ವಿದ್ಯಾರ್ಥಿಗಳನ್ನು ಮಾತ್ರ ಕುರಿತು ನಾನು ಈ ಮಾತುಗಳನ್ನು ಹೇಳುತ್ತಿಲ್ಲ. ನಾನು ವಿದ್ಯಾರ್ಥಿಯಾಗಿದದಾಗಲೂ ಇದೇ ನೆಲೆಯೇ ಇತ್ತು. ನಾನು ವಿಜ್ಞಾನದಲ್ಲಿ ಪಾಸು ಮಾಡಿದ್ದೂ ಮೂಸಿ ನೋಡಿಯೇ, ರುಚಿ ನೋಡಿಯೇ ನಮಗಿಂತಲೂ ಎತ್ತರವಾದ ಮೆಟ್ಟಿಲುಗಳಲ್ಲಿ ತಲೆಯೆತ್ತಿ ನಿಂತಿರುವ ಪಾಶ್ಚಾತ್ಯ ದೇಶಗಳಲ್ಲಿ ವರ್ಗೀಕರಣ ವಿಭಾಗಾಧ್ಯಯನ ಸಾಂಗವಾಗಿಯೇ ನೆರವೇರುತ್ತ ಬಂದಿದೆ. ಸಾಕಷ್ಟು ಮಂದಿ ಪಾರಂಗತರೂ ಇದ್ದಾರೆ. ಪ್ರವೀಣರಾದ ಉಪಾಧ್ಯಾಯರೂ ಇದ್ದಾರೆ; ಶಿಸ್ತಿನಿಂದ ಕಲಿಯಲು ಮುಂದೆ ಬರುವ ವಿದ್ಯಾರ್ಥಿಗಳೂ ಇದ್ದಾರೆ. ಈ ದೇಶದಲ್ಲಿಯೂ ಅಂಥ ವಾತಾವರಣ ಏರ್ಪಟ್ಟು ವರ್ಗೀಕರಣ ವಿಭಾಗದ ಅಭ್ಯುದಯಕ್ಕೆ ಆಸರೆಗಳು ಒದಗಿ ಸಾವಿರಾರು ವಿದ್ವಾಂಸರು ಹುಟ್ಟಿಕೊಂಡ ಹೊರತು ನಮ್ಮ ಸಸ್ಯಾರಣ್ಯದಲ್ಲಿ ಕವಿದಿರುವ ಕತ್ತಲು ಶಾಶ್ವತವಾಗಿ ಹಾಗೆಯೇ ಉಳಿದಿರುತ್ತದೆ"[37] ಪಾಶ್ಚಾತ್ಯ ದೇಶಗಳಲ್ಲಿ ನಡೆಯುತ್ತಿರುವಂತೆಯೇ ವರ್ಗೀಕರಣ ವಿಭಾಗ ಇಲ್ಲೂ ನಡೆಯಬೇಕೆಂಬ ಆಶಯವೊಂದು ಇಲ್ಲಿ ವ್ಯಕ್ತವಾಗಿದೆ.

ಇನ್ನು ಅಧ್ಯಾಪಕರಿಗೆ ಸಂಬಂಧಪಟ್ಟ ಹಾಗೆ ಇನ್ನೂ ಒಂದು ಕೊರತೆಯನ್ನು ಸ್ವಾಮಿಯವರು ಗುರುತಿಸುತ್ತಾರೆ. ತರಗತಿಗಳಲ್ಲಿ ಪಾಠ ಹೇಳಿಕೊಟ್ಟು ದಕ್ಷರೆನಿಸಿಕೊಂಡ ಅಧ್ಯಾಪಕರು ಎಷ್ಟೇ ಸಂಖ್ಯೆಯಲ್ಲಿರಬಹುದು. ಆದರೆ ಈ ಅರ್ಹತೆಯ ಜೊತೆಗೆ ಕಾಡು ಮೇಡುಗಳಲ್ಲಿ ಓಡಿಯಾಡಿ, ಅಲ್ಲಿನ ಕಷ್ಟಗಳನ್ನನುಭವಿಸಿ ಹಿಂಜರಿಯದೇ ವಿದ್ಯಾರ್ಥಿಗಳಿಗೆ ಮಾದರಿಯಾಗಿ ಸಾಹಸ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಉತ್ಸಾಹಿ ಅಧ್ಯಾಪಕರ ಕೊರತೆಯೊಂದು ನಮ್ಮ ಶಿಕ್ಷಣವ್ಯವಸ್ಥೆಯಲ್ಲಿರುವುದು ಬಿ.ಜಿ.ಎಲ್.ಸ್ವಾಮಿಯವರು ಗುರುತಿಸುವುದನ್ನು ಕಾಣಬಹುದಾಗಿದೆ. ಇನ್ನೊಂದು ಮುಖ್ಯವಾದ ಸಮಸ್ಯೆಯೆಂದರೆ ಅದು ಅಧಿಕಾರಿಗಳದ್ದು. ತಮ್ಮಲ್ಲಿರುವ ಅಧಿಕಾರವನ್ನು ಚಲಾಯಿಸಿ ಪ್ರತಿಷ್ಠೆ ತೋರಿಸುವುದಕೋಸ್ಕರ ಕ್ರಿಯಾಶೀಲ, ಉತ್ಸಾಹಿ ಮನಸ್ಸುಗಳನ್ನು ಚಿವುಟಿ ಹಾಕಿ, ಅವರಿಗೆ ಹಲವು ರೀತಿಯ ಸಮಸ್ಯೆಗಳನ್ನುಂಟು ಮಾಡುವುದನ್ನು ನೋಡಬಹುದಾಗಿದೆ.

ಪೂರ್ಣಚಂದ್ರತೇಜಸ್ವಿ ಮತ್ತು ಬಿ.ಜಿ.ಎಲ್.ಸ್ವಾಮಿ ಇವರಿಬ್ಬರ ಕೃತಿಗಳಲ್ಲಿ ಗಂಭೀರವಾದ ಹಲವು ವಿಷಯಗಳು ಚರ್ಚಿತವಾಗುತ್ತದೆ. ಅಲ್ಲಿನ ಸಮಸ್ಯೆಗಳನ್ನು, ಅದಕ್ಕೆ ಕಾರಣಗಳನ್ನು ವಿವರಿಸಬೇಕಾದರೆ, ಅವುಗಳಾವುವು ಕಾಲ್ಪನಿಕ ಅಥವಾ ಎಂದೋ ನಡೆದಿರಬಹುದಾದ ಘಟನೆಗಳಿರಬಹುದು ಎಂದೆನಿಸುವುದಿಲ್ಲ, ಅವುಗಳು ಇನ್ನು ಜೀವಂತವಾಗಿರುವುದರಿಂದ ತಕ್ಷಣ ನಮ್ಮ ಗಮನಕ್ಕೆ ಬರುತ್ತದೆ. ಅದು ಕೃತಿಯಲ್ಲಿ ಚರ್ಚಿತವಾಗಿರುವ ಶಿಕ್ಷಣ ವ್ಯವಸ್ಥೆಯ ದೋಷ, ರೈತರ ಸ್ಥಿತಿಗತಿ, ಭ್ರಷ್ಟ ರಾಜಕಾರಣ, ಬಂಡವಾಳಶಾಹಿ ವ್ಯವಸ್ಥೆ, ಮನುಷ್ಯ ವಿನಾಶಕಾರಿಗುಣ, ನಾಟಿವೈದ್ಯ ಪದ್ಧತಿಯಲ್ಲಿನ ಸಮಸ್ಯೆಗಳು, ಪರಿಸರದ ರಕ್ಷಣೆಯಿಲ್ಲದೆ ಬರಿದಾಗುತ್ತಿರುವ ಕಾಡು, ಅವಸಾನದ ಅಂಚನ್ನು

ತಲುಪುತ್ತಿರುವ ಕಾಡಿನ ಪ್ರಾಣಿ-ಪಕ್ಷಿಗಳು ಮುಂತಾದ ಹಲವು ಅಂಶಗಳಾಗಿವೆ. ಆದ್ದರಿಂದ ಇವರಿಬ್ಬರ ಕೃತಿಗಳು ಓದುಗರಲ್ಲಿ ಒಂದು ಅರಿವನ್ನು, ಜಾಗೃತಿಯನ್ನು ಮೂಡಿಸಲು ಸಹಕಾರಿಯಾಗಿವೆ ಎಂದು ಹೇಳಬಹುದು.

**ಅಡಿ ಟಿಪ್ಪಣಿಗಳು**

1. ಹಸುರುಹೊನ್ನು – ಬಿ.ಜಿ.ಎಲ್.ಸ್ವಾಮಿ, ಕಾವ್ಯಾಲಯ, ಪುಟಸಂಖ್ಯೆ–77
2. ಅದೇ, ಪುಟ –77
3. ಅದೇ, ಪುಟ –81
4. ಅದೇ ಪುಟ – 99
5. ಅದೇ, ಪುಟ – 99
6. ಅದೇ, ಪುಟ – 102
7. ಅದೇ, ಪುಟ – 241
8. ಅದೇ, ಪುಟ – 43
9. ಅದೇ, ಪುಟ – 46
10. ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು – ತೇಜಸ್ವಿ, ಪುಸ್ತಕ ಪ್ರಕಾಶನ, ಪುಟಸಂಖ್ಯೆ–50
11. ತೇಜಸ್ವಿ ಸಾಹಿತ್ಯಕೃಷಿ – ಸಂ.ಪ್ರೊ.ಜಿ.ಟಿ.ವೀರಪ್ಪ ಮತ್ತು ಡಾ.ಎಂ.ಬೈರೇಗೌಡ, ಲೇಖಕ:ಕೃಷ್ಣಮೂರ್ತಿ ಹನೂರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಪುಟಸಂಖ್ಯೆ – 57
12. ಹಸುರುಹೊನ್ನು – ಬಿ.ಜಿ.ಎಲ್.ಸ್ವಾಮಿ, ಕಾವ್ಯಾಲಯ, ಪುಟಸಂಖ್ಯೆ – 331
13. ಅದೇ, ಪುಟ – 331
14. ತೇಜಸ್ವಿ ಸಾಹಿತ್ಯಕೃಷಿ – ಸಂ.ಪ್ರೊ.ಜಿ.ಟಿ.ವೀರಪ್ಪ ಮತ್ತು ಡಾ.ಎಂ.ಬೈರೇಗೌಡ, ಲೇಖಕ:ಕೃಷ್ಣಮೂರ್ತಿ ಹನೂರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಪುಟಸಂಖ್ಯೆ – 57
15. ಹಸುರು ಹೊನ್ನು – ಬಿ.ಜಿ.ಎಲ್.ಸ್ವಾಮಿ, ಕಾವ್ಯಾಲಯ, ಪುಟಸಂಖ್ಯೆ–209
16. ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು – ತೇಜಸ್ವಿ, ಪುಸ್ತಕಪ್ರಕಾಶನ, ಪುಟಸಂಖ್ಯೆ–81
17. ಪರಿಸರದ ಕತೆ – ತೇಜಸ್ವಿ, ಪುಸ್ತಕ ಪ್ರಕಾಶನ, ಪುಟಸಂಖ್ಯೆ–3
18. ಹೆಜ್ಜೆ ಮೂಡದ ಹಾದಿ – ತೇಜಸ್ವಿ, ಪುಸ್ತಕ ಪ್ರಕಾಶನ, ಪುಟಸಂಖ್ಯೆ–64
19. ಪರಿಸರದ ಕತೆ – ತೇಜಸ್ವಿ, ಪುಸ್ತಕ ಪ್ರಕಾಶನ, ಪುಟಸಂಖ್ಯೆ–121
20. ಅದೇ, ಪುಟ – 122
21. ಹಸುರುಹೊನ್ನು – ಬಿ.ಜಿ.ಎಲ್.ಸ್ವಾಮಿ, ಕಾವ್ಯಾಲಯ, ಪುಟಸಂಖ್ಯೆ–101

22. ನೆಲಮುಟ್ಟುವ ಪ್ರೀತಿ – ಡಾ.ವಿ.ಚಂದ್ರಶೇಖರ ನಂಗಲಿ, ಮುದ್ದುಶ್ರೀ ಗ್ರಂಥಮಾಲೆ, ಪುಟಸಂಖ್ಯೆ–159

23. ಅದೇ, ಪುಟ –160

24. ತಿಂಗಳು (ಮಾಸಪತ್ರಿಕೆ) – ಲೇಖಕ : ಎಸ್.ನಟರಾಜ ಬೂದಾಳು, ಪುಟಸಂಖ್ಯೆ – 41

25. ಅದೇ, ಪುಟ – 41

26. ಪರಿಸರದ ಕತೆ – ತೇಜಸ್ವಿ, ಪುಸ್ತಕಪ್ರಕಾಶನ, ಪುಟಸಂಖ್ಯೆ – 87

27. ಪರಿಸರದ ಕತೆ – ತೇಜಸ್ವಿ, ಪುಸ್ತಕ ಪ್ರಕಾಶನ, ಪುಟಸಂಖ್ಯೆ – 87

28. ಅದೇ ಪುಟ – 87

29. ಹಸುರುಹೊನ್ನು – ಬಿ.ಜಿ.ಎಲ್.ಸ್ವಾಮಿ, ಕಾವ್ಯಾಲಯ, ಪುಟಸಂಖ್ಯೆ – 320

30. ಅದೇ, ಪುಟ – 334

31. ಅದೇ, ಪುಟ – 335

32. ಅದೇ, ಪುಟ – 336

33. ಅದೇ, ಪುಟ – 117

34. ಅದೇ, ಪುಟ – 99

35. ಅದೇ, ಪುಟ –201

36. ಅದೇ, ಪುಟ – 291

37. ಅದೇ, ಪುಟ –291

# ಅಧ್ಯಾಯ – 6

## ಸಮಾರೋಪ

ಆಧುನಿಕ ಕನ್ನಡ ಸಾಹಿತ್ಯದಲ್ಲೇ ಪೂರ್ಣಚಂದ್ರ ತೇಜಸ್ವಿ ಮತ್ತು ಬಿ.ಜಿ.ಎಲ್.ಸ್ವಾಮಿಯರು ಪ್ರಮುಖ ಲೇಖಕರಾಗಿದ್ದಾರೆ. ಇವರ 'ಪರಿಸರದ ಕತೆ', 'ಹಸುರುಹೊನ್ನು' ಕೃತಿಗಳು ವಸ್ತು, ನಿರೂಪಣಾ ಶೈಲಿ, ಧೋರಣೆಯ ಮೂಲಕ ಗಮನ ಸೆಳೆಯುತ್ತವೆ. ಈ ಕೃತಿಗಳಲ್ಲಿ ಇಬ್ಬರೂ ಲೇಖಕರು ತಾವು ಕಂಡು ಗ್ರಹಿಸಿದ ಪರಿಸರದ ಚಿತ್ರಣವನ್ನು ನೀಡಿದ್ದಾರೆ. ಆದರೆ ಅದು ಪ್ರಾದೇಶಿಕತೆಯ ಸೀಮಿತತೆಯ ಎಲ್ಲೆಯನ್ನು ಮೀರಿ ವ್ಯಾಪಕವಾಗಿ ಬೆಳೆಯುತ್ತದೆ. 'ಪರಿಸರ'ವನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡೇ ಅಲ್ಲಿನ ಪರಿಸ್ಥಿತಿ, ಪಲ್ಲಟಗಳು, ಸಮಸ್ಯೆಗಳನ್ನು ತಿಳಿಯಬೇಕಿಲ್ಲ. ಅದರ ಬಗೆಗೆ ಆಸಕ್ತಿ, ಕುತೂಹಲ, ಕಾಳಜಿಗಳಿದ್ದರೇ ಸಾಕು ಅದನ್ನು ಅರ್ಥ ಮಾಡಿಕೊಳ್ಳಬಹುದು. ಇದರ ಜೊತೆಗೆ ಲೇಖಕ ಪ್ರಜ್ಞೆಯಿದ್ದರೆ, ಅವನ ಪ್ರತಿಭೆ ಅದಕ್ಕೊಂದು ಸಾಹಿತ್ಯಕ ಚೌಕಟ್ಟನ್ನು ಒದಗಿಸಿ ಉತ್ತಮ ಕೃತಿಯನ್ನಾಗಿ ಮಾಡಬಲ್ಲದು ಎಂಬುದಕ್ಕೆ ಈ ಇಬ್ಬರೂ ಲೇಖಕರು ನಿದರ್ಶನವಾಗಿದ್ದಾರೆ. ಪರಿಸರದಲ್ಲಿನ ಪ್ರಾಣಿಪಕ್ಷಿ ಸಂಕುಲ, ವನಸಂಪತ್ತು ಸಂಪದ್ಭರಿತ ನಿಧಿ ಇದ್ದಹಾಗೆ,ಇವುಗಳು ತಮ್ಮ ಸೊಬಗು, ಜೀವನಶೈಲಿ, ಹಲವು ರೀತಿಯ ಸೃಷ್ಟಿ ವೈಚಿತ್ರ್ಯದಿಂದ ಕಣ್ಮನ ಸೆಳೆಯುತ್ತ, ಬೆರಗು, ಕುತೂಹಲ ಮೂಡಿಸುತ್ತವೆ ಎಂದು ವಿವರಿಸುತ್ತ ಅದರ ಬೆನ್ನಲ್ಲೇ ಮಾನವನ ಕ್ರೂರ ವರ್ತನೆಯ ಈ ಅಮೂಲ್ಯವಾದ ನಿಧಿಯನ್ನು ಹೇಗೆ ಹಾಳು ಮಾಡುತ್ತ ಅಳಿವಿನಂಚಿಗೆ ಸರಿಸಿದ್ದಾನೆ ಎಂದು ಹಲವು ನಿದರ್ಶನಗಳ ಮೂಲಕ ತಿಳಿಸುತ್ತಾರೆ.

ಈ ನಿಬಂಧದ ಉದ್ದೇಶವು ಇದೇ ಆಗಿದೆ ಅಂದರೆ, ತೇಜಸ್ವಿ ಮತ್ತು ಬಿ.ಜಿ.ಎಲ್.ಸ್ವಾಮಿಯವರ ಕೃತಿಗಳಲ್ಲಿ 'ಪರಿಸರ'ದ ಸ್ವರೂಪ ಯಾವ ಬಗೆಯದು ಮತ್ತು ಇವತ್ತಿನ ಸಂದರ್ಭಕ್ಕೆ ಇವರ ಚಿಂತನೆಗಳು ಎಷ್ಟರಮಟ್ಟಿಗೆ ಪ್ರಸ್ತುತವೆನಿಸುತ್ತದೆ ಎಂಬುದನ್ನು ತಿಳಿಯುವುದೇ ಆಗಿದೆ. ಈ ನಿಬಂಧದಲ್ಲಿ ಮೊದಲಿಗೆ ಕುವೆಂಪು ಮತ್ತು ಶಿವರಾಮಕಾರಂತರ 'ಪರಿಸರ'ದ ಚಿಂತನೆಗಳನ್ನು ವಿವೇಚಿಸಲು ಪ್ರಯತ್ನಿಸಲಾಗಿದೆ. ಅಧ್ಯಯನದ ಸೀಮಿತತೆಯಿಂದಾಗಿ ಕುವೆಂಪುರವರ ಕಾದಂಬರಿಗಳನ್ನು, ಶಿವರಾಮಕಾರಂತರ ಲೇಖನಗಳನ್ನು ಈ ನಿಟ್ಟಿನಲ್ಲಿ ನೋಡಿದಾಗ 'ಪರಿಸರ' ಎಂಬುದು ಅಲ್ಲಿ ಪ್ರಧಾನ ಕಾಳಜಿಯಾಗಿ, ಕೇಂದ್ರವಾಗಿ ಬರದೆ ಸಹಜವಾಗೇ ಮೂಡಿಬಂದಿದೆ. ಕಾರಂತರು ಸ್ವಲ್ಪಮಟ್ಟಿಗೆ ಮನುಷ್ಯ ನಿಸರ್ಗದ ಮೇಲೆ ಆಕ್ರಮಣ ಮಾಡಿ ನಾಶಗೊಳಿಸುತ್ತಿರುವುದನ್ನು ಗುರುತಿಸಿದ್ದಾರೆ. ಇವರುಗಳಿಗೆ ಹೋಲಿಸಿದಾಗ ತೇಜಸ್ವಿ ಮತ್ತು ಸ್ವಾಮಿಯವರು 'ಪರಿಸರ'ಕ್ಕೆ ಹೆಚ್ಚು ಒತ್ತುನೀಡಿದ್ದಾರೆನ್ನಬಹುದು.

ತೇಜಸ್ವಿ ಮತ್ತು ಬಿ.ಜಿ.ಎಲ್.ಸ್ವಾಮಿಯವರು ತಮ್ಮ ಕೃತಿಗಳಲ್ಲಿ ಕೇವಲ ಲೇಖಕರಾಗಿರದೇ ಕೇಂದ್ರಪಾತ್ರವಾಗಿಯೂ ಕಾಣಿಸಿಕೊಳ್ಳುತ್ತಾರೆ. ತಾವು ಕಂಡು, ಗ್ರಹಿಸಿ ಅನುಭವಕ್ಕೆ ಬಂದಂತಹದ್ದನ್ನು ಸಾಹಿತ್ಯಿಕ ಚೌಕಟ್ಟಿನಲ್ಲಿ ಅಭಿವ್ಯಕ್ತಿಸಿರುವುದರಿಂದ ಹೆಚ್ಚು ಆಕರ್ಷವೆನಿಸುತ್ತದೆ. ಈ ಇಬ್ಬರೂ ಲೇಖಕರ ಬಗ್ಗೆಯೂ ಒಂದೊಂದು ಅಧ್ಯಾಯದಲ್ಲಿ ಅವರ ಚಿಂತನೆಗಳು ಪಡೆದುಕೊಂಡಿರುವ ಸ್ವರೂಪವನ್ನು ಕುರಿತು ವಿವರಿಸಲಾಗಿದೆ. ಮತ್ತೊಂದು ಅಧ್ಯಾಯದಲ್ಲಿ ತೇಜಸ್ವಿ ಮತ್ತು ಬಿ.ಜಿ.ಎಲ್.ಸ್ವಾಮಿಯವರ ಚಿಂತನೆಗಳಲ್ಲಿ ಕಂಡುಬರುವ ಸಮಾನ ಅಂಶಗಳನ್ನು, ಅವುಗಳ ವೈಶಿಷ್ಟ್ಯವನ್ನು, ಪ್ರಸ್ತುತ ಸಂದರ್ಭಕ್ಕೆ ಅವು ಹೇಗೆ ಅನ್ವಯವಾಗುತ್ತವೆ ಮತ್ತು ಅರಿವು ಮೂಡಿಸುತ್ತದೆಂಬುದನ್ನು ಕುರಿತು ಚರ್ಚಿಸಲಾಗಿದೆ.

## ಪರಾಮರ್ಶನ ಗ್ರಂಥಗಳು


1. ಸಂ. ಅರವಿಂದ ಮಾಲಗತ್ತಿ — ಕುವೆಂಪು ಕೃತಿ ವಿಮರ್ಶೆ
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು, 2006

2. ಡಾ.ಉದ್ದಂಡಯ್ಯ — ಕುವೆಂಪು ಕಥನ
ಅಧ್ಯಯನ ಮಂಡಲ, ಬೆಂಗಳೂರು
2004

3. ಕೃಷ್ಣಮೂರ್ತಿ ಹನೂರು — ನುಡಿಶೋಧ
ಕನ್ನಡ ಪುಸ್ತಕ ಪ್ರಾಧಿಕಾರ,
ಬೆಂಗಳೂರು, 2004

4. ಕುವೆಂಪು — ಮಲೆಗಳಲ್ಲಿ ಮದುಮಗಳು
ಉದಯರವಿ ಪ್ರಕಾಶನ,
ಮೈಸೂರು, 2004

5. ಡಾ.ಚಂದ್ರಶೇಖರ ನಂಗಲಿ.ವಿ — ನೆಲಮುಟ್ಟುವ ಪ್ರೀತಿ
ಮುದ್ದುಶ್ರೀ ಗ್ರಂಥಮಾಲೆ,
ಬೆಂಗಳೂರು, 2007

6. ತಿಂಗಳು ಮಾಸ ಪತ್ರಿಕೆ — ಮೇ, 2010

7. ಪೂರ್ಣಚಂದ್ರತೇಜಸ್ವಿ.ಕೆ.ಪಿ. — ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು
ಪುಸ್ತಕ ಪ್ರಾಧಿಕಾರ,
ಮೈಸೂರು, 2006

8. ಪೂರ್ಣಚಂದ್ರ ತೇಜಸ್ವಿ.ಕೆ.ಪಿ — ಅಬಚೂರಿನ ಪೋಸ್ಟಾಫೀಸು
ಪುಸ್ತಕ ಪ್ರಾಧಿಕಾರ
ಮೈಸೂರು, 2009

9. ಪೂರ್ಣಚಂದ್ರ ತೇಜಸ್ವಿ.ಕೆ.ಪಿ. — ಪರಿಸರದ ಕತೆಗಳು
ಪುಸ್ತಕ ಪ್ರಾಧಿಕಾರ
ಮೈಸೂರು, 2008

| | |
|---|---|
| 10. ಪೂರ್ಣಚಂದ್ರ ತೇಜಸ್ವಿಕೆ.ಪಿ. | ಚಿದಂಬರ ರಹಸ್ಯ<br>ಸುವರ್ಣ ಸಾಹಿತ್ಯ ಗ್ರಂಥಮಾಲೆ<br>ಬೆಂಗಳೂರು, 2006 |
| 11. ಪೂರ್ಣಚಂದ್ರತೇಜಸ್ವಿಕೆ.ಪಿ. | ಹೆಜ್ಜೆ ಮೂಡದ ಹಾದಿ<br>ಪುಸ್ತಕ ಪ್ರಾಧಿಕಾರ<br>ಮೈಸೂರು, 2007 |
| 12. ಪೂರ್ಣಚಂದ್ರತೇಜಸ್ವಿಕೆ.ಪಿ. | ವಿಮರ್ಶೆಯ ವಿಮರ್ಶೆ<br>ಪುಸ್ತಕ ಪ್ರಾಧಿಕಾರ<br>ಮೈಸೂರು, 2009 |
| 13. ಬಸವರಾಜ ಸಬರದ | ಸಾಹಿತ್ಯ ಸಂಗತಿ<br>ಪಲ್ಲವಿ ಪ್ರಕಾಶನ<br>ಗುಲಬರ್ಗಾ, 1994 |
| 14. ಬಿ.ಜಿ.ಎಲ್.ಸ್ವಾಮಿ | ಹಸಿರುಹೊನ್ನು<br>ಕಾವ್ಯಾಲಯ ಪ್ರಕಾಶನ<br>ಮೈಸೂರು, 1982 |
| 15. ಸಂ.ಡಾ.ಬೈರೇಗೌಡ.ಎಂ.<br>ಪ್ರೊ.ಜಿ.ಟಿ.ವೀರಪ್ಪ | ತೇಜಸ್ವಿ ಸಾಹಿತ್ಯ ಕೃಷಿ<br>ಕರ್ನಾಟಕ ಸಾಹಿತ್ಯ ಅಕಾಡೆಮಿ<br>ಬೆಂಗಳೂರು, 2004 |
| 16. ಸಂ.ಹ.ಕ.ರಾಜೇಗೌಡ | ಕುವೆಂಪು ಸಾಹಿತ್ಯ ಲೋಕ-2<br>ಕುವೆಂಪು ಅಧ್ಯಯನ ಕೇಂದ್ರ<br>ಬೆಂಗಳೂರು, 1983 |
| 17. ಲತಾ ರಾಜಶೇಖರ್ | ಕುವೆಂಪು ಕಾವ್ಯದಲ್ಲಿ ಪ್ರಕೃತಿ – ಒಂದು ಅದ್ಯಯನ<br>ಸಹ್ಯಾದ್ರಿ ಪ್ರಕಾಶನ<br>ಮೈಸೂರು, 2003 |
| 18. ಶಿವರಾಮ ಕಾರಂತ | ಸ್ಮೃತಿ ಪಟಲದಿಂದ<br>ರಾಜಲಕ್ಷ್ಮೀ ಪ್ರಕಾಶನ<br>ಬೆಂಗಳೂರು, 1981 |

19. ಶಿವಾರೆಡ್ಡಿ.ಕೆ.ಸಿ ಕನ್ನಡದ ಹಾಡು ಪಾಡು
ಅಧ್ಯಯನ ಮಂಡಲ
ಬೆಂಗಳೂರು, 2003

20. ಸಂ. ಸಿ.ಪಿ.ಕೆ. ಆಯ್ದ ಕುವೆಂಪು ಕವನಗಳು
ಚೇತನ ಬುಕ್ ಹೌಸ್
ಮೈಸೂರು. 1990